***WATER*** 12 lakh lpd to be supplied from KIADB. The company shall adopt rain water harvesting and water recycling.

***INCENTIVES & CONCESSIONS :*** As per Millennium IT Policy, GOK, & SEZ Policy of Govt. of India..

**Environment:**

The promoters were advised to obtain CFE from KSPCB and ECC from GOI. No civil works shall commence prior to obtaining ECC.

**Employment:** The company shall prepare a plan for development of human resource required for the project, train local people and provide employment to these trained local youth and comply with Government policy of employment to local people. A copy of human resource development plan shall be sent to the Director of IT & Biotechnology for monitoring.

**Vendor Development**: Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Director of IT & Biotechnology for monitoring

**Social Infrastructure Development**: The company is advised to take up social infrastructure development projects in the vicinity of proposed location of the unit. A copy of such projects shall be sent to the Director of IT & Biotechnology for monitoring.

**Others:**

The Promoter shall take all statutory and other necessary clearances and shall submit milestones / progress in implementation of the project regularly, which will be monitored by the Departments concerned.

By order and in the name of the President of India,

**M.V.KRISHNAMURTHY**

P.R. 541

Under Secretary to Government,
Information Technology, Biotechnology
and Science & Technology Department

**FOREST, ECOLOGY AND ENVIRONMENT SECRETART**

**Sub :** Diversion of 4.98 ha. of forest land in Kudrekanive RF of Hosadurga Range for establishment of Cement Factory in favour of M/s Suvarna Karnataka Cements Ltd., in Chitradurga District.

**Read:**

1. Letter No. A5(1)MNG.CR-20/07-08,dated: 25-01-2008 of Principal Chief Conservator of Forests, Bangalore.
2. State Government letter No. FEE 9 FFM 2008, dated: 20-02-2008.
3. Letter No.4-KRB.470/2008-BAN/2034,dated:03-03-2008 of Government of India, Ministry of Environment and Forests, Regional Office, Southern Zone, Bangalore.
4. A5(1) MNG.CR-20/07-08,dated: 25-3-2008 of Principal Chief Conservator of Forests, Bangalore.
5. State Government letter No. FEE 9 FFM 2008, dated: 04-04-2008.
6. Letter No.4-KRB 470/2008-BAN/2224,dated:04-04-2008 of Government of India, Ministry of Environment and Forests, Regional Office, Southern Zone, Bangalore.

**PREAMBLE:**

The Principal Chief Conservator of Forests,Bangalore vide his letter dated:25.01.2008 read at 1 above has submitted the proposal to obtain the approval of Government of India under Section 2 of The Forest (Conservation) Act,1980 for diversion of 4.98 ha. of forest land in Kudrekanive RF of Hosadurga

Range for establishment of Cement Factory in favour of M/s Suvarna Karnataka Cements Pvt. Ltd. in Chitradurga District.

Accordingly the proposal was recommended to Government of India vide State Government letter dated 20-02-2008 read at 2 above.

The Government of India, Ministry of Environment and Forests, Regional office, Bangalore vide their letter dated:03-03-2008 read at 3 above has given its in principle (Stage-I) approval for diversion of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 25-03-2008 furnished the compliance report read at 4 above and the same was forwarded to Government of India Ministry of Environment and Forests, Regional Office, South Zone, Bangalore vide State Government letter dated: 04-04-2008 read at 5 above.

Government of India Ministry of Environment and Forests, Regional Office, South Zone, Bangalore vide their letter dated: 04-04-2008 read at 6 above has conveyed its approval (Stage-II) under Section 2 of The Forest (Conservation) Act, 1980 for diversion of 4.98 ha. of forest land in Kudrekanive RF of Hosadurga Range for establishment of Cement Factory in favour of M/s Suvarna Karnataka Cements Pvt. Ltd. in Chitradurga District subject to certain conditions.

The proposal has been examined in detail and hence the order.

**GOVERNMENT ORDER NO. FEE 9 FFM 2008, BANGALORE, DATED: 05/04/2008**

In the circumstances explained in the preamble above, Government is pleased to accord sanction under Section 2 of The Forest (Conservation) Act, 1980 for diversion of 4.98 ha. of forest land in Kudrekanive RF of Hosadurga Range for establishment of Cement Factory in favour of M/s Suvarna Karnataka Cements Pvt. Ltd. in Chitradurga District subject to the following conditions.

1. The legal status of the forest land shall remain unchanged.
2. The demarcation of the proposed forest land under this project shall be done by constructing a compound wall at the cost of user agency.
3. The Compensatory afforestation shall be raised over an extent of 4.98 ha. in the identified non-forest land at Sy.No.16 & 17 of Rangapur Village, Hiriyur Taluk, Chitradurga at the cost of user agency. The State Government shall obtain prior permission of Central Government for change of location and schedule of compensatory afforestation site, if any.
4. Non forest land for compensatory afforestation shall be notified by the State Government as RF/PF under Indian Forest Act, 1927 or the State Forest Act within a period of 6 months and Nodal Officer(Forest Conservation) shall report the compliance within 6 months.
5. The funds received from the user agency towards NPV, CA under this project shall be transferred to Ad-hoc CAMPA in account No.CA-1582 of Corporation Bank, Block-II, CGO Complex,Phase-1, Lodhi Road, New Delhi-110 003 immediately under intimation to Government of India.
6. Only existing built up structure will be utilized and no new construction shall be permitted.
7. The responsibility for violation of Forest(Conservation)Act, 1980 has to be fixed and action against the erring officials to be immediately initiated. Action taken report in this regard shall be furnished to the Government of India at the earliest.
8. The total forest area utilized for the project shall not exceed 4.98 ha. and it shall be used only for the purpose for which it is diverted. In case the land is not used for the stipulated purpose

or when it is no longer needed for the said purpose, then the area will be resumed by the Forest Department, under Section 82 of Karnataka Forest Act, 1963.

9. The Karnataka Forest Department shall recover the value of the factory building Rs. 18,49,172.00 and machinery and plant value Rs. 11,50,000.00 (total Rs. 29,99,172.00) which are located in the leased area, from the user agency.
10. The user agency has to pay the lease rent as fixed by the Government at the time of sanction and any subsequent orders in this regard.
11. The lease is granted for 20 years.
12. The Karnataka Forest Act 1963 and Rules 1969 will be applicable for any violation.
13. Only minimum number of trees shall be cut based on actual requirement of the project.
14. The user agency shall pay the extraction and transportation charges of trees numerated by the Deputy Conservator of Forests from the land if extracts.
15. Any other condition imposed by the Government of India/Government of Karnataka and Principal Chief Conservator of Forests will have to be abided by the lessee.

By order and in the name of the President of India,

**P.R.KALAVATHI**

Under Secretary to Government,

Forest, Ecology and Environment Department

P.R. 678

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಮಹಮದ್ ಸಾಧಿಕ್, ತಹಶೀಲ್ದಾರ್, ಸೊರಬ, ಶಿವಮೊಗ್ಗ ಜಿಲ್ಲೆ ಇವರು ಅಕ್ರಮ ಸಂಭಾವನೆ ಸ್ವೀಕರಿಸುವಾಗ ಲೋಕಾಯುಕ್ತ ಬಲೆಗೆ ಸಿಕ್ಕಿಬಿದ್ದಿದ್ದು, ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರ ಪತ್ರ ಸಂ: ಪ್ರಾಆಕ: ಸಿಸಿಎ: ಸಿಆರ್: 62/07–08, ದಿನಾಂಕ: 03–01–2008.

2 ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ: ಲೋಕ/ಐಎನ್‌ವಿ(ಜಿ) ಸಿಟಿಎಲ್.25/ಸಿಆರ್–8/07, ದಿನಾಂಕ: 07–12–2007.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ (1)ರ ಪ್ರಾದೇಶಿಕ ಆಯುಕ್ತರ ಪತ್ರದಲ್ಲಿ ದಿನಾಂಕ: 30–11–2007ರಂದು ಶ್ರೀ ಮಹಮದ್ ಸಾಧಿಕ್, ತಹಶೀಲ್ದಾರ್ ಸೊರಬ ತಾಲ್ಲೂಕು ಮತ್ತು ಶ್ರೀ ಬಿ. ವಿಶ್ವನಾಥ್, ಶಿರಸ್ತೇದಾರ್ ತಾಲ್ಲೂಕು ಕಛೇರಿ, ಸೊರಬ, ಶಿವಮೊಗ್ಗ ಜಿಲ್ಲೆ ಇವರುಗಳು ಲಂಚ ಪಡೆಯುತ್ತಿದ್ದಾಗ ಲೋಕಾಯುಕ್ತ ಬೀಸಿದ ಬಲೆಗೆ ಸಿಕ್ಕಿ ಬಿದ್ದಿರುವುದರಿಂದ ಇವರುಗಳ ಮೇಲೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 713(1)(ಡಿ) ಜೊತೆಗೆ 13(2)ರ ಪ್ರಕಾರ ಶಿವಮೊಗ್ಗ ಲೋಕಾಯುಕ್ತ ಪೊಲೀಸ್ ಠಾಣೆ ಸಂ: ಲೋ.ನಂ. 8/2007ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುವುದಾಗಿ ಹಾಗೂ ಆಪಾದನೆಯು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಆರೋಪಿಗಳು ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಇವರುಗಳನ್ನು ಕೂಡಲೇ ಅಮಾನತ್ತಿನಲ್ಲಿಡಬೇಕೆಂದು ಅಪರ ಪೊಲೀಸ್ ಮಹಾ ನಿರ್ದೇಶಕರು, ಲೋಕಾಯುಕ್ತ, ಬೆಂಗಳೂರು ಇವರು ಕೋರಿರುವುದರಿಂದ ಹಾಗೂ ಈ ಪ್ರಕರಣದಲ್ಲಿ ಆರೋಪಿತ ನೌಕರರಾದ ಶ್ರೀ ಬಿ.ವಿಶ್ವನಾಥ್, ಶಿರಸ್ತೇದಾರರು, ತಾಲ್ಲೂಕು ಕಛೇರಿ, ಸೊರಬ ಇವರನ್ನು ನಿಲಂಬನೆಗೊಳಿಸಿ ಆದೇಶಿಸಲಾಗಿದೆ ಎಂದು ಮೇಲೆ ಓದಲಾದ ಕ್ರ.ಸಂ. (1) ರಲ್ಲಿ ಪ್ರಾದೇಶಿಕ ಆಯುಕ್ತರು, ಬೆಂಗಳೂರು ತಿಳಿಸಿ ಶ್ರೀ ಮಹಮದ್ ಸಾಧಿಕ್, ತಹಶೀಲ್ದಾರ್, ಸೊರಬ ಇವರನ್ನು ಈ ಕೂಡಲೇ ನಿಲಂಬನೆಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುವರು.

ಸರ್ಕಾರವು ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಒಪ್ಪಿ, ಶ್ರೀ ಮಹಮದ್ ಸಾಧಿಕ್, ತಹಶೀಲ್ದಾರ್, ಸೊರಬ ತಾಲ್ಲೂಕು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 45 ಎಡಿಇ 2007, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ, ನಿಯಮ 10(1) (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಹಮದ್ ಸಾಧಿಕ್, ತಹಶೀಲ್ದಾರ್, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರನ್ನು ಕ್ರಿಮಿನಲ್ ಮೊಕದ್ದಮೆ/ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಗಳು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಅನುಮತಿ ಪಡೆಯದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 363

**ಬಿ.ವಿ.ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎನ್.ಹೆಚ್. ಸೂಳೇಭಾವಿ ಕೆ.ಎ.ಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಇವರ ವಿರುದ್ಧ ಇಲಾಖಾ ವಿಚಾರಣೆ–ಅಂತಿಮ ಆದೇಶ.

**ಓದಲಾಗಿದೆ:** 1. ದಿನಾಂಕ:20–3–07ರ ಆದೇಶ ಸಂ: ಸಿಆಸುಇ 296 ಎಸ್‌ಇಎನ್ 06

2 ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ವರದಿ ದಿನಾಂಕ:28–12–07

**ಪ್ರಸ್ತಾವನೆ:**

ನೇಮಕಾತಿ ನಿರೀಕ್ಷಣೆಯಲ್ಲಿದ್ದ ಶ್ರೀ ಎನ್ ಹೆಚ್ ಸೂಳೇಭಾವಿ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರನ್ನು ದಿನಾಂಕ:20–6–06 ರ ಅಧಿಸೂಚನೆ ಸಂಖ್ಯೆ ಸಿಆಸುಇ 097 ಆಸೇವ 06 ರ ಪ್ರಕಾರ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಹಾವೇರಿ ಜಿಲ್ಲಾಧಿಕಾರಿಗಳ ಕಚೇರಿ, ಹಾವೇರಿ ಹುದ್ದೆಗೆ ವರ್ಗಾಯಿಸಿದ್ದು, ಇವರು ಸದರಿ ವರ್ಗಾಯಿಸಿದ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದಿರುವ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ಸಲುವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆರೋಪದ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಬಿ. ರಂಗಸ್ವಾಮಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಕ್ರಮ ಸಂ:(2)ರಂತೆ ವಿಚಾರಣಾಧಿಕಾರಿಯವರು ಸಲ್ಲಿಸಿದ ವಿಚಾರಣಾ ವರದಿಯಲ್ಲಿ ಶ್ರೀ ಎನ್.ಹೆಚ್. ಸೂಳೇಭಾವಿ ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಇವರು ದಿನಾಂಕ:20–6–06ರ ಅಧಿಸೂಚನೆ ಸಂಖ್ಯೆ:ಸಿಆಸುಇ 097 ಆಸೇವ 06ರ ಪ್ರಕಾರ ವರ್ಗಾಯಿಸಲಾದ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಹಾವೇರಿ ಜಿಲ್ಲಾಧಿಕಾರಿಗಳ ಕಛೇರಿ, ಹಾವೇರಿ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದೇ. ಸದರಿ ಅಧಿಸೂಚನೆಯನ್ನು ಉಲ್ಲಂಘಿಸಿ, ಅನಧಿಕೃತವಾಗಿ ಗೈರು ಹಾಜರಾಗಿರುವ ಆರೋಪವು ಸಾಬೀತಾಗಿದೆ ಎಂದು ವರದಿ ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ ಅಂಗೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ:ಸಿಆಸುಇ 305 ಕೆಇಪಿ 07 ಬೆಂಗಳೂರು, ದಿನಾಂಕ:16ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮವಳಿ 1957ರ ನಿಯಮ 8 (ii) ರ ಪ್ರಕಾರ ಶ್ರೀ ಎನ್.ಹೆಚ್. ಸೂಳೇಭಾವಿ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ (ಪ್ರಸ್ತುತ ಪರಿಷತ್ತು ಕಾರ್ಯದರ್ಶಿ, ಬೆಳಗಾಂ ಮಹಾನಗರ ಪಾಲಿಕೆ, ಬೆಳಗಾಂ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ) ಇವರಿಗೆ ವಾಗ್ದಂಡನೆ ವಿಧಿಸಿದೆ.

ಸದರಿ ಅಧಿಕಾರಿಯು ಗೈರುಹಾಜರಾದ ದಿನಾಂಕ :11–7–06 ರಿಂದ 17–8–06 ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, 1958ರ ನಿಯಮ 106–A ರ ಪ್ರಕಾರ dies non ಅವಧಿಯೆಂದು ಆದೇಶಿಸುತ್ತದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.667 **ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ:** ಶ್ರೀಮತಿ ಎನ್. ದೇವಕುಮಾರಿ, ಕೆ.ಎ.ಎಸ್ (ನಿವೃತ್ತ) ಅಧಿಕಾರಿ ಹಾಗೂ ಶ್ರೀ ಪಿ. ಶಿವಣ್ಣ ಕಿರಿಯ ಅಭಿಯಂತರರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ಬದಲಿ ಮಂಡನಾಧಿಕಾರಿಯನ್ನು ನೇಮಕ ಮಾಡಲು ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂ:ಸಿಆಸುಇ 129 ಕೆಇಪಿ 2007 ದಿ;24.10.2007

2 ಗ್ರಾ.ಅ ಮತ್ತು ಪಂ.ರಾಜ್ ಇಲಾಖೆಯ ಟಿಪ್ಪಣಿ ಸಂ: ಗ್ರಾಅಪ:5776:ಆರ್‌ಪಿ:08 ದಿ:14–03–08

**ಪ್ರಸ್ತಾವನೆ:**

ಶ್ರೀಮತಿ ಎನ್. ದೇವಕುಮಾರಿ ಕೆ.ಎ.ಎಸ್. ಅಧಿಕಾರಿ (ನಿ) ಇವರು ಬೆಂಗಳೂರಿನ ಮಹಾತ್ಮ ಗಾಂಧಿ ಗ್ರಾಮೀಣ ಇಂಧನ ಮತ್ತು ಅಭಿವೃದ್ಧಿ ಸಂಸ್ಥೆಯಲ್ಲಿ ನಿರ್ದೇಶಕರಾಗಿ :ವಿಶೇಷ ಕರ್ತವ್ಯಾಧಿಕಾರಿಯಾಗಿ ಮತ್ತು ಶ್ರೀ ಪಿ. ಶಿವಣ್ಣ ಇವರು ಸದರಿ ಸಂಸ್ಥೆಯಲ್ಲಿ ಕಿರಿಯ ಅಭಿಯಂತರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ವಿಂಡ್ ಜನರೇಟರ್ ಖರೀದಿಯಲ್ಲಿ ಅವ್ಯವಹಾರ ನಡೆಸಿದ್ದರೆನ್ನಲಾದ ಆಪಾದನೆಗಳ ಸಂಬಂಧ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿ:24–10–07 ರ ಸರ್ಕಾರಿ ಆದೇಶದಲ್ಲಿ ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಅಧೀನ ಕಾರ್ಯದರ್ಶಿ (ಜಿಲ್ಲಾ ಪಂಚಾಯತ್), ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ ಕರ್ನಾಟಕ ಸರ್ಕಾರದ ಸಚಿವಾಲಯ ರವರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. ಮೇಲೆ ಕ್ರಮ ಸಂ:(2)ರಲ್ಲಿ ಟಿಪ್ಪಣಿಯಲ್ಲಿ ಮಂಡನಾಧಿಕಾರಿಯಾಗಿ ನೇಮಿಸಿದ್ದ ಅಧೀನ ಕಾರ್ಯದರ್ಶಿ (ಜಿಲ್ಲಾ ಪಂಚಾಯತ್ ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ ರವರು ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆಯಲ್ಲಿನ ಕೆಲಸದ ಒತ್ತಡದಿಂದ ಮಂಡನಾಧಿಕಾರಿಯ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗುತ್ತಿಲ್ಲವಾದ, ಕಾರಣ ಬದಲಿ ಮಂಡನಾಧಿಕಾರಿಯನ್ನು ನೇಮಕ ಮಾಡಲು ಕೋರಿರುತ್ತಾರೆ. ಅದರಂತೆ ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಉಪ ನಿರ್ದೇಶಕರು (ಗ್ರಾಮೀಣ ಇಂಧನ ಕಾರ್ಯಕ್ರಮ) ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂ:ಸಿಆಸುಇ 291 ಕೆಇವಿ 2007 ಬೆಂಗಳೂರು, ದಿನಾಂಕ:10ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಮತಿ ಎನ್. ದೇವಕುಮಾರಿ, ಕೆ.ಎ.ಎಸ್. ಅಧಿಕಾರಿ (ನಿ) ಹಾಗೂ ಶ್ರೀ ಪಿ.ಶಿವಣ್ಣ ಕಿರಿಯ ಅಭಿಯಂತರರು ಇವರ ವಿರುದ್ಧಮಾಡಲಾದ ಆರೋಪಗಳ ಕುರಿತು ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಅಧೀನ ಕಾರ್ಯದರ್ಶಿ (ಜಿಲ್ಲಾ ಪಂಚಾಯತ್)ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ ರವರ ಬದಲಾಗಿ ಉಪನಿರ್ದೇಶಕರು (ಗ್ರಾಮೀಣ ಇಂಧನ ಕಾರ್ಯಕ್ರಮ) ಗ್ರಾ.ಅ. ಮತ್ತು ಪಂರಾಜ್ ಇಲಾಖೆ ಕರ್ನಾಟಕ ಸರ್ಕಾರ ಸಚಿವಾಲಯ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಲಾಗಿದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.651 **ಹೆಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ENERGY SECRETARIAT**

**No. EN 54 PSR 2007, Bangalore, Dated 11th September 2008**

**CORRIGENDUM**

For the figures appeared in G.O. No. EN 54 PSR 2007 dated 31-3-2008 as indicated in column-2 below may be read as per the figures indicated in column-3.

| Sl.No. | Works & Figures as appeared in G.O. | To be read as |
|---|---|---|
| 1 | 2 | 3 |
| A | Order Portion<br>KPTCL's & ESCOMs Portion<br>Sl No.3<br>Principal Repayment of Loans:<br>6801-00-205-1-02<br>Rs. In crores<br>PMGY 0.53<br>APDRP 5.90<br>6.43 | Order Portion<br>KPTCL's & ESCOMs Portion<br>Sl No.3<br>Principal Repayment of Loans:<br>6801-00-190-1-02<br>Rs. In crores<br>PMGY 0.53<br>APDRP 5.90<br>6.43 |

By order and in the name of the Governor of Karnataka,

PR. 1302

**S.J. SAMPATHKUMAR**

Under Secretary to Government,

Energy Department.

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** ರಾಜ್ಯದಲ್ಲಿ ಉಕ್ಕು, ಸಿಮೆಂಟ್, ಆಹಾರ ಸಂಸ್ಕರಣ, ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ, ಆಟೋಮೊಬೈಲ್ ಮತ್ತು ಸಿದ್ದ ಉಡುಪುಗಳಿಗಾಗಿ ಒಟ್ಟು 6 ಕೈಗಾರಿಕಾ ವಲಯಗಳಲ್ಲಿ ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ವಲಯವನ್ನು ಸ್ಥಾಪಿಸುವ ಬಗ್ಗೆ – ಕಾರ್ಯಪಡೆ ಸಮಿತಿ ರಚನೆ – ಆದೇಶ.

**ಓದಲಾಗಿದೆ :**

1. ದಿನಾಂಕ: 17–7–2008 ರಂದು ಮಾನ್ಯ ಮುಖ್ಯಮಂತ್ರಿಗಳಿಂದ ವಿಧಾನ ಮಂಡಲದಲ್ಲಿ ಮಂಡಿಸಲಾದ ಆಯವ್ಯಯ ಭಾಷಣದ ವರದಿ ಕಂಡಿಕೆ 119.
2. ಸರ್ಕಾರಿ ಆದೇಶ ಸಂಖ್ಯೆ: ಸಿಐ 194 ಎಸ್‌ಪಿಐ 2008, ದಿನಾಂಕ 2–8–2008.
3. ನಿರ್ದೇಶಕರು, ಮಾತಂ ಮತ್ತು ಜೈತಂ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ ಮಾತಂನಿ/ಲೆಕ್ಕ–1/26/ಮಾತಂಜೈತಂವಲಯ/362/2008–09, ದಿನಾಂಕ 23–8–2008.

**ಪ್ರಸ್ತಾವನೆ :**

ಉಲ್ಲೇಖ (1)ರಲ್ಲಿ ಓದಲಾದಂತೆ, ಮಾನ್ಯ ಮುಖ್ಯಮಂತ್ರಿಗಳು, ದಿನಾಂಕ 7–7–2008ರಂದು ವಿಧಾನ ಮಂಡಲದಲ್ಲಿ ಮಂಡಿಸಿದ 2008–09ನೇ ಸಾಲಿನ ಮುಂಗಡ ಪತ್ರದಲ್ಲಿ ರಾಜ್ಯ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲಗಳನ್ನು ಗಮನದಲ್ಲಿರಿಸಿಕೊಂಡು ಆರು ವಿಶೇಷ ವಲಯಗಳನ್ನು ಖಾಸಗಿ ಸಹಭಾಗಿತ್ವದಲ್ಲಿ ರೂಪಿಸಲಾಗುವುದು ಅವುಗಳೆಂದರೆ, ಉಕ್ಕು ವಲಯ, ಸಿಮೆಂಟ್ ವಲಯ, ಆಹಾರ ವಲಯ, ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ವಲಯ, ಆಟೋಮೊಬೈಲ್ ವಲಯ ಮತ್ತು ಸಿದ್ಧಪಡಿಸಿದ ಉಡುಪುಗಳ ವಲಯಗಳನ್ನು ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಸ್ಥಾಪಿಸಲಾಗುವುದು ಎಂದು ಘೋಷಿಸಿರುತ್ತಾರೆ. ಈ ಆರು ಕೈಗಾರಿಕಾ ವಲಯಗಳನ್ನು ಸ್ಥಾಪಿಸಲು ಉದ್ದೇಶಿಸಲಾಗಿದ್ದು, ಸದರಿ ಕೈಗಾರಿಕಾ ವಲಯಗಳನ್ನು 5 ವರ್ಷಗಳಲ್ಲಿ ಸ್ಥಾಪಿಸಲು ಕಾರ್ಯಪಡೆಗಳ ಮುಖೇನ ನುರಿತ ತಜ್ಞರನ್ನು (Consultants) ನೇಮಿಸಲು ಹಾಗೂ ಸಾಧ್ಯತಾ ವರದಿಗಳನ್ನು (feasibility studies) ತಯಾರಿಸಲು ಕಾರ್ಯಪಡೆ ಸಮಿತಿಯನು ರಚಿಸಬೇಕಾಗಿರುತ್ತದೆಯೆಂದು ಘೋಷಿಸಲಾಗಿರುತ್ತದೆ.

ಮೇಲೆ 2 ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿ ಉಕ್ಕು, ಸಿಮೆಂಟ್, ಆಹಾರ ಸಂಸ್ಕರಣೆಗೆ ಸಂಬಂಧಿಸಿದಂತೆ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ವತಿಯಿಂದ ಕಾರ್ಯಪಡೆ ಸಮಿತಿ ರಚನೆಗೆ ಆದೇಶಿಸಲಾಗಿದ್ದು, ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ವಲಯಕ್ಕೆ ಸಂಬಂಧಪಟ್ಟ ಕಾರ್ಯಪಡೆ ಸಮಿತಿಯ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದೆಂದು ಆದೇಶಿಸಲು ತಿಳಿಸಲಾಗಿದೆ.

ಮೇಲೆ ಓದಲಾದ ಉಲ್ಲೇಖ (3)ರಲ್ಲಿನ ನಿರ್ದೇಶಕರು, ಮಾತಂ ಮತ್ತು ಜೈತಂ ನಿರ್ದೇಶನಾಲಯ, ಇವರ ಪತ್ರದಲ್ಲಿ ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ವಲಯದ ಕಾರ್ಯಪಡೆ ರಚನೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆ ಮತ್ತು ಮಾನ್ಯ ಮುಖ್ಯಮಂತ್ರಿಗಳ ಆಯವ್ಯಯ ಭಾಷಣದ ವರದಿಯನ್ನು ಅನುಷ್ಠಾನಗೊಳಿಸಲು ಈ ಕೆಳಕಂಡಂತೆ ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ವಲಯದ ಕಾರ್ಯಪಡೆ ರಚನೆಗೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 50 ಅಡವಿ 2008, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ದಿನಾಂಕ 17–7–2008ರಂದು ಮಾನ್ಯ ಮುಖ್ಯಮಂತ್ರಿಗಳಿಂದ ಘೋಷಿಸಲಾದ ಆಯವ್ಯಯ ಭಾಷಣದ ವರದಿ ಕಂಡಿಕೆ 119ರಲ್ಲಿ

ರಾಜ್ಯದಲ್ಲಿ ಉಕ್ಕು, ಸಿಮೆಂಟ್, ಆಹಾರ ಸಂಸ್ಕರಣ, ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ, ಆಟೋಮೊಬೈಲ್ ಮತ್ತು ಸಿದ್ದ ಉಡುಪುಗಳಿಗಾಗಿ ಒಟ್ಟು 6 ಕೈಗಾರಿಕಾ ವಲಯಗಳಲ್ಲಿ ಮಾಹಿತಿ ಮತ್ತು ಜೈವಿಕ ತಂತ್ರಜ್ಞಾನ ವಲಯಕ್ಕೆ ಸಂಬಂಧಿಸಿದಂತೆ ಕಾರ್ಯಪಡೆ ಸಮಿತಿಗೆ ಈ ಕೆಳಕಂಡವರನ್ನು ಒಳಗೊಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಲಾಗಿದೆ.

**ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಲಯ – ಕಾರ್ಯಪಡೆ ರಚನೆ**

| | |
|---|---|
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ | – ಅಧ್ಯಕ್ಷರು |
| ನಿರ್ದೇಶಕರು, ಮಾತಂ ಮತ್ತು ಜೈತಂ ನಿರ್ದೇಶನಾಲಯ | – ಸದಸ್ಯರು |
| ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್ | – ಸದಸ್ಯರು |
| ಅಪರ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ | – ಸದಸ್ಯರು |
| ಸಂಬಂಧಿಸಿದ ಜಿಲ್ಲೆಯ ಜಿಲ್ಲಾಧಿಕಾರಿ | – ಸದಸ್ಯರು |
| ನಿರ್ದೇಶಕರು, iiit-B- ಬೆಂಗಳೂರು | – ಸದಸ್ಯರು |
| ನಿರ್ದೇಶಕರು, IBAB - ಬೆಂಗಳೂರು | – ಸದಸ್ಯರು |
| ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಒಬ್ಬ ಖ್ಯಾತ ಉದ್ಯಮಿ | – ಸದಸ್ಯರು |
| ಜೈವಿಕ ತಂತ್ರಜ್ಞಾನ ಕ್ಷೇತ್ರದ ಒಬ್ಬ ಖ್ಯಾತ ಉದ್ಯಮಿ | – ಸದಸ್ಯರು |
| ಸದಸ್ಯ ಕಾರ್ಯದರ್ಶಿ– ಅಧ್ಯಕ್ಷರಿಂದ ತೀರ್ಮಾನವಾಗಬೇಕು | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1244

**ಎಮ್.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ಚಾಮರಾಜನಗರ ಜಿಲ್ಲೆಯ ಹನೂರು ಪೊಲೀಸ್ ಠಾಣೆಯಲ್ಲಿ 3 ಬಂದೂಕುಗಳು ಕಾಣೆಯಾಗಲು ಕಾರಣರಾಗಿರುವ ಅಧಿಕಾರಿಗಳ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:**
1) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಸಿಬಿ(5)/53/2006–07 ದಿನಾಂಕ 23–03–2007 ಮತ್ತು 21–02–2008.
2) ಸರ್ಕಾರದ ಆದೇಶ ಸಂಖ್ಯೆ:ಒಇ 158 ಪೊಸಿಪ 2007, ದಿನಾಂಕ 14–06–2007.
3) ಕರ್ನಾಟಕ ಲೋಕಸೇವಾ ಅಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ/52/ಸಿಎನ್‌ಎಸ್ 2008, ದಿನಾಂಕ 05–07–2008 ಮತ್ತು 01–09–2008.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ಡಿಜಿ ಮತ್ತು ಐಜಿಪಿ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಶ್ರೀ. ಆರ್. ಮಲ್ಲೇಶ್, ಪಿ.ಐ. ಹಾಲಿ ಸೋಲದೇವನಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ನಗರ, 2) ಶ್ರೀ. ಎಂ.ಟಿ. ಆಲಿ, ಪಿ.ಐ. ಸರಸ್ವತಿಪುರಂ, ಮೈಸೂರು ನಗರ 3) ಶ್ರೀ. ಬಿ.ಎಸ್. ಶಾಂತಕುಮಾರ್, ಪಿ.ಐ. ರಾಯಚೂರು ಪಶ್ಚಿಮ ವೃತ್ತ, ರಾಯಚೂರು ಜಿಲ್ಲೆ, 4) ಶ್ರೀ. ಚಲುವರಾಜು, ಡಿಎಸ್‌ಪಿ, ಮೈಸೂರು ಗ್ರಾಮಾಂತರ ಉಪ ವಿಭಾಗ, ಮೈಸೂರು ಜಿಲ್ಲೆ, 5) ಶ್ರೀ. ಪ್ರಭಾಕರ್ ರಾವ್ ಶಿಂಧೆ, ಪಿ.ಐ.

ನಂಜನಗೂಡು ವೃತ್ತ, ಮೈಸೂರು ಜಿಲ್ಲೆ, 6) ಶ್ರೀ. ಹೆಚ್.ಬಿ. ಬಸವೇಶ್, ಪಿ.ಐ. ಪಾಂಡವಪುರ ವೃತ್ತ, ಮಂಡ್ಯ ಜಿಲ್ಲೆ ರವರುಗಳು ಚಾಮರಾಜನಗರ ಜಿಲ್ಲೆಯ ಹನೂರು ಪೊಲೀಸ್ ಠಾಣೆಯಲ್ಲಿ 3 ಬಂದೂಕುಗಳು ಕಾಣೆಯಾಗಲು ಈ ಮೇಲಿನ ಪೊಲೀಸ್ ಅಧಿಕಾರಿಗಳು ಕಾರಣರಾಗಿರುತ್ತಾರೆಂದು ಡಿವೈ.ಎಸ್.ಪಿ. ಕೊಳ್ಳೇಗಾಲ ಉಪ ವಿಭಾಗ ರವರ ಪೂರ್ವಭಾವಿ ವಿಚಾರಣಾ ವರದಿಯಿಂದ ಹಾಗೂ ಎಸ್.ಪಿ. ಚಾಮರಾಜನಗರ ಜಿಲ್ಲೆ ಇವರ ಪತ್ರವನ್ನು ಪರಿಶೀಲಿಸಿದಾಗ ಸದರಿ ಅಧಿಕಾರಿಯವರ ವಿರುದ್ಧ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಇವರ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮಗಳು 1965/89ರ ನಿಯಮ 6 ಉಪ ನಿಯಮ 2 ಮತ್ತು 8 ರ ಪ್ರಕಾರ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಹೆಚ್ಚುವರಿ ಎಸ್.ಪಿ. ಚಾಮರಾಜನಗರ ಜಿಲ್ಲೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಡಿಜಿ ಮತ್ತು ಐಜಿಪಿ ರವರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಹೆಚ್ಚುವರಿ ಪೊಲೀಸ್ ಅಧೀಕ್ಷಕರು, ಚಾಮರಾಜನಗರ ಜಿಲ್ಲೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಓದಲಾದ (2)ರಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಲಾಗಿತ್ತು. ವಿಚಾರಣಾಧಿಕಾರಿಯವರು ಆರೋಪಿತ ಪರ ಹಾಗೂ ವಿರುದ್ಧ ಸಾಕ್ಷಿಗಳನ್ನು ಮತ್ತು ದಾಖಲಾತಿಗಳನ್ನು ಪರಿಶೀಲಿಸಿ ಸಲ್ಲಿಸಲಾದ ವರದಿಯನ್ನು ಮೇಲೆ ಓದಲಾದ (3) ರಲ್ಲಿ ಡಿಜಿ ಮತ್ತು ಐಜಿಪಿ ರವರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ಪ್ರಕರಣದಲ್ಲಿ ಆ.ಪೊ.ಅ ಶ್ರೀ. ಆರ್. ಮಲ್ಲೇಶ್, ಪಿ.ಐ. ಶ್ರೀ. ಎಂ.ಟಿ. ಆಲಿ, ಪಿ.ಐ., ಶ್ರೀ.ಬಿ.ಎಸ್.ಶಾಂತಕುಮಾರ್, ಪಿ.ಐ. ಮತ್ತು ಶ್ರೀ. ಪ್ರಭಾಕರ್ ರಾವ್, ಪಿ.ಐ. ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ. ಹಾಗೂ ಶ್ರೀ. ಚೆಲುವರಾಜು, ಡಿವೈ.ಎಸ್.ಪಿ. ಮತ್ತು ಶ್ರೀ. ಹೆಚ್.ಬಿ. ಬಸವೇಶ್, ಪಿ.ಐ. ಇವರ ವಿರುದ್ಧ ಆರೋಪಗಳು ಸಾಬೀತಾಗಿರುವುದಾಗಿ ವರದಿ ಮಾಡಿರುತ್ತಾರೆ.

ಈ ಪ್ರಕರಣದಲ್ಲಿ ಒಟ್ಟು ಆರು ಜನ ಆರೋಪಿತರುಗಳ ಪೈಕಿ ನಾಲ್ಕನೇ ಆರೋಪಿಯಾದ ಶ್ರೀ ಚೆಲುವರಾಜು, ಡಿವೈ.ಎಸ್.ಪಿ., ಮೈಸೂರು ಗ್ರಾಮಾಂತರ ವಿಭಾಗ ಮತ್ತು 6ನೇ ಆರೋಪಿಯಾದ ಶ್ರೀ ಹೆಚ್.ಬಿ. ಬಸವೇಶ್, ಪಿ.ಐ., ಪಾಂಡವಪುರ ವೃತ್ತ ಇವರುಗಳು ಹನೂರು ಠಾಣೆಯಿಂದ ಕ್ರಮವಾಗಿ ವರ್ಗಾವಣೆಯಾದ ಸಂದರ್ಭದಲ್ಲಿ, ಪ್ರಭಾರವನ್ನು ಕೊಡುವ ಮತ್ತು ತೆಗೆದುಕೊಳ್ಳುವಲ್ಲಿ ಬೇಜವಾಬ್ದಾರಿತನವನ್ನು ತೋರಿ, ಮೂರು ಬಂದೂಕುಗಳು ಕಾಣೆಯಾಗಿರುವುದಕ್ಕೆ ಕಾರಣರಾಗಿರುತ್ತಾರೆ. ಠಾಣೆಯಲ್ಲಿನ ವಸ್ತುಗಳನ್ನು ಪಟ್ಟಿ ಮಾಡಿ ತಮ್ಮ ಸ್ಥಾನದಲ್ಲಿ ವರ್ಗಾವಣೆಯಾಗಿ ಬಂದ ಶ್ರೀ ಹೆಚ್.ಬಿ. ಬಸವೇಶ್, ಇವರು ಪ್ರಭಾರವನ್ನು ಲಿಖಿತರೂಪದಲ್ಲಿ ವಹಿಸಿಕೊಂಡಿರುವುದಿಲ್ಲ. 4ನೇ ಆರೋಪಿಯಾದ ಶ್ರೀ ಚೆಲುವರಾಜು, ಡಿವೈ.ಎಸ್.ಪಿ. ಇವರು ಠಾಣೆಯಲ್ಲಿನ ವಸ್ತುಗಳನ್ನು ಪಟ್ಟಿಮಾಡಿ, ತಮ್ಮ ಸ್ಥಾನಕ್ಕೆ ಬಂದವರಿಗೆ ಲಿಖಿತ ರೂಪದಲ್ಲಿ ಪ್ರಭಾರ ವಹಿಸಿಕೊಡುವಲ್ಲಿ ವಿಫಲರಾಗಿದ್ದು, ಜಂಟಿ ಇಲಾಖಾ ವಿಚಾರಣೆಯಲ್ಲಿ ಇವರ ಮೇಲಿನ ಆರೋಪಗಳು ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ. ಇವರ ವಿರುದ್ಧ ಕರ್ನಾಟಕ ಪೋಲೀಸ್ ಕಾಯಿದೆಯ ಕಲಂ 23(1)(ಬಿ)ರನ್ವಯ ಇವರ ಪ್ರಸ್ತುತ ವೇತನಶ್ರೇಣಿಯಲ್ಲಿ ಎರಡು ಹಂತ ಕೆಳಗಿಳಿಸಿ ಹೊಸದಾಗಿ ವೇತನ ಬಡ್ತಿ ಪಡೆಯುವ ದಂಡನೆಯನ್ನು ವಿಧಿಸಲು ತೀರ್ಮಾನಿಸಲಾಯಿತು. ಶ್ರೀ ಬಸವೇಶ್ ರವರು ವೇತನ ಶ್ರೇಣಿ ರೂ.10800–20025/– ಆಗಿದ್ದು ಇವರ ಮೂಲ ವೇತನ ರೂ.18,000/– ಇರುತ್ತದೆ. ಆರೋಪಿತ ಪೊಲೀಸ್ ಅಧಿಕಾರಿಗಳಿಗೆ ಸರ್ಕಾರದಿಂದ 19–4–2008 ರಂದು ಕಾರಣ ಕೇಳುವ ನೋಟೀಸ್ ಅನ್ನು ಹೊರಡಿಸಿ ಸಮಜಾಯಿಷಿ ಕೋರಲಾಗಿತ್ತು. ಸದರಿ ಸಮಜಾಯಿಷಿಗೆ ಆರೋಪಿತ ಪೊಲೀಸ್ ಅಧಿಕಾರಿಗಳಿಂದ ಸಮಜಾಯಿಷಿಯನ್ನು ಪಡೆಯಲಾಯಿತು. ಸದರಿ ಸಮಜಾಯಿಷಿಯನ್ನು ಪರಿಶೀಲಿಸಿ, ಅದರಲ್ಲಿ ಯಾವುದೇ ಹೊಸ ಅಂಶಗಳಿಲ್ಲದೇ ಇರುವುದನ್ನು ಸರ್ಕಾರ ಗಮನಿಸಿದೆ.

ಈ ದಂಡನೆಯನ್ನು ವಿಧಿಸುವ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಲಾಯಿತು. ಕರ್ನಾಟಕ ಲೋಕಸೇವಾ ಅಯೋಗವು ಮೇಲೆ ಓದಲಾದ (3) ರ ಪತ್ರದಲ್ಲಿ ಆಪಾದಿತರುಗಳಿಗೆ ವಿಧಿಸಲು ಉದ್ದೇಶಿಸಿರುವ ದಂಡನೆಯು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 8 (iv-a) ರಡಿ ವಿಧಿಸಿದಂತೆ ಕಂಡುಬರುವುದರಿಂದ ಸದರಿ ದಂಡನೆಯನ್ನು ವಿಧಿಸಲು ಕರ್ನಾಟಕ ಲೋಕಸೇವಾ ಆಯೋಗ (ಸಮಾಲೋಚನೆ) ವಿನಿಮಯಗಳು 2000ದ ನಿಯಮ (5)(1)(ಬಿ) ರನ್ವಯ ಆಯೋಗದ ಸಹಮತಿ ಅಗತ್ಯ ವಿರುವುದಿಲ್ಲವೆಂದು ನಿಯಮಾನುಸಾರ ಸರ್ಕಾರ ತೆಗೆದುಕೊಳ್ಳುವ ಕ್ರಮಕ್ಕೆ ಆಯೋಗದ ಅಭ್ಯಂತರವಿಲ್ಲವೆಂದು ತಿಳಿಸಿದೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 158 ಪೊಸಿಪ 2007 ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳು, ವಿಚಾರಣಾ ವರದಿ, ದಾಖಲೆಗಳ ಪರಿಶೀಲನೆಯ ಹಿನ್ನೆಲೆಯಲ್ಲಿ ಶ್ರೀ. ಚಲುವರಾಜು, ಡಿಎಸ್‌ಪಿ, ಮೈಸೂರು ಗ್ರಾಮಾಂತರ ಉಪ ವಿಭಾಗ, ಮೈಸೂರು ಜಿಲ್ಲೆ ಮತ್ತು ಶ್ರೀ. ಹೆಚ್.ಬಿ. ಬಸವೇಶ್, ಪಿ.ಐ. ಪಾಂಡವಪುರ ವೃತ್ತ, ಮಂಡ್ಯ ಜಿಲ್ಲೆ ರವರ ವಿರುದ್ದ ಆರೋಪವು ಸಾಬೀತಾಗಿರುವುದರಿಂದ ಇವರ ಪ್ರಸ್ತುತ ವೇತನಶ್ರೇಣಿಯಲ್ಲಿ ಎರಡು ಹಂತ ಕೆಳಗಿಳಿಸಿ ಹೊಸದಾಗಿ ವೇತನ ಬಡ್ತಿ ಪಡೆಯುವ ದಂಡನೆಯನ್ನು ವಿಧಿಸಿದೆ.

ಮುಂದುವರೆದು, ಈ ಕೆಳಕಂಡ ನಾಲ್ವರು ಅಧಿಕಾರಿಗಳ ವಿರುದ್ಧ ಹೊರಿಸಲಾದ ಆರೋಪವು ಸಾಬೀತಾಗಿರದ ಕಾರಣ ಇವರನ್ನು ದೋಷಾರೋಪಣೆಗಳಿಂದ ದೋಷಮುಕ್ತಗೊಳಿಸಿ ಆದೇಶಿಸಲಾಗಿದೆ.

1. ಶ್ರೀ. ಆರ್. ಮಲ್ಲೇಶ್, ಪಿ.ಐ. ಹಾಲಿ ಸೋಲದೇವನಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ನಗರ,
2. ಶ್ರೀ. ಎಂ.ಟಿ. ಆಲಿ, ಪಿ.ಐ. ಸರಸ್ವತಿಪುರಂ, ಮೈಸೂರು ನಗರ
3. ಶ್ರೀ. ಬಿ.ಎಸ್. ಶಾಂತಕುಮಾರ್, ಪಿ.ಐ. ರಾಯಚೂರು ಪಶ್ಚಿಮ ವೃತ್ತ, ರಾಯಚೂರು ಜಿಲ್ಲೆ,
4. ಶ್ರೀ. ಪ್ರಭಾಕರ್ ರಾವ್ ಶಿಂಧೆ, ಪಿ.ಐ. ನಂಜನಗೂಡು ವೃತ್ತ, ಮೈಸೂರು ಜಿಲ್ಲೆ,

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1335

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಭೀಮಣ್ಣ ತಾಯಪ್ಪ ಚವ್ಹಾಣ, ಪೊಲೀಸ್ ಉಪಾಧೀಕ್ಷಕರು, ಡಿ.ಸಿ.ಆರ್.ಬಿ. ಧಾರವಾಡ ರವರು ಅಕ್ರಮ ಆಸ್ತಿ ಹೊಂದಿರುವವರೆಂಬ ಕರ್ನಾಟಕ ಲೋಕಾಯುಕ್ತ ರವರ ವರದಿ – ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ:ಲೋಕ್/ ಐಎನ್ವಿ(ಜಿ)/ಎಲ್–3/ಸಿಆರ್–9/2008/ಬಿಜೆಪಿ, ದಿನಾಂಕ 29–08–2008.

**ಪ್ರಸ್ತಾವನೆ:**

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಕಛೇರಿ ರವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸುತ್ತಾ ಶ್ರೀ. ಭೀಮಣ್ಣ ತಾಯಪ್ಪ ಚವ್ಹಾಣ, ಪೊಲೀಸ್ ಉಪಾಧೀಕ್ಷಕರು, ಡಿ.ಸಿ.ಆರ್.ಬಿ. ಧಾರವಾಡ ರವರು ನಿಗಧಿತ ಆದಾಯಕ್ಕಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವುದರ ಬಗ್ಗೆ ಖಚಿತ ಮಾಹಿತಿಯ ಹಿನ್ನೆಲೆಯಲ್ಲಿ ಅವರ ವಿರುದ್ಧ ಬಿಜಾಪುರ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊ.ಸಂ.9/2008ರ ಕಲಂ 13(1)(ಇ) r/w 13(2)ರ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ ರೀತ್ಯಾ ಪ್ರಕರಣವನ್ನು ದಾಖಲಿಸಿಕೊಳ್ಳಲಾಯಿತು. ದಾಖಲಿಸಿಕೊಂಡ ನಂತರ ದಿನಾಂಕ 06–08–2008ರಂದು ಪ್ರಧಾನ ಜಿಲ್ಲಾ ಸತ್ರ ಮತ್ತು ವಿಶೇಷ ನ್ಯಾಯಾಲಯ, ವಿಜಾಪುರ ರವರಿಂದ ಅಗತ್ಯವಾದ ಶೋಧನಾ ವಾರೆಂಟ್‌ಗಳನ್ನು ಪಡೆದುಕೊಂಡು ಆರೋಪಿತರ ವಿಜಾಪುರದ ಚಾಲುಕ್ಯ ನಗರದಲ್ಲಿರುವ ವಾಸದ ಮನೆ, ಬರಡೋಲ ಗ್ರಾಮದಲ್ಲಿರುವ ತೋಟದ ಮನೆ ಹಾಗೂ ಧಾರವಾಡದ ಕಾರ್ಯಾಲಯದ ಮೇಲೆ ಪಂಚಸಾಕ್ಷಿಗಳ ಸಕ್ಷಮ ಶೋಧಿಸಿದಾಗ ಅಪಾರ ಮೊತ್ತದ ಸ್ಥಿರ–ಚರಾಸ್ಥಿ ದೊರೆತಿರುತ್ತವೆ. ಪ್ರಾಥಮಿಕ ತನಿಖೆಯಿಂದ ಆರೋಪಿತರು ಅವರ ಬಲ್ಲ ಮೂಲಗಳಿಗಿಂತ ಹೊಂದಿರುವ ಅಕ್ರಮ ಆಸ್ತಿಗಳ ಮೌಲ್ಯ ರೂ.158.6% ಆಗಿರುತ್ತದೆ. ಸದರಿ ಹೆಚ್ಚುವರಿ ಅಕ್ರಮ ಮೂಲಗಳಿಂದ ಗಳಿಸಿರುವ ಚರ–ಸ್ಥಿರ ಆಸ್ತಿಗಳ ಮೌಲ್ಯವು ಆರೋಪಿತ ಸರ್ಕಾರಿ ನೌಕರ ಶೋಧನಾ ಅವಧಿಯಲ್ಲಿ ನಿಗಧಿತ ಮೂಲಗಳಿಂದ ಗಳಿಸಿರುವ ವರಮಾನಕ್ಕಿಂತ ಹೆಚ್ಚಿನ ಮೊತ್ತವಾಗಿರುತ್ತದೆ. ಅಲ್ಲದೆ, ಆರೋಪಿತರು, ವಿವಿಧ ಬಾಬ್ತುಗಳಿಗಾಗಿ ಮಾಡಿರುವ ಖರ್ಚು–ವೆಚ್ಚಗಳು ಇನ್ನೂ ಕೆಲವು ಮೂಲಗಳಿಂದ ಬರಬೇಕಾಗಿದೆ. ಇದರಿಂದ ಭವಿಷ್ಯದಲ್ಲಿ ಪ್ರಕರಣದ ತನಿಖೆ ಮುಂದುವರೆದಂತೆ ಹೆಚ್ಚಿನ ಚರ–ಸ್ಥಿರಾಸ್ತಿ ಮತ್ತು ಖರ್ಚು ವೆಚ್ಚಗಳ ಒಟ್ಟಾರೆ ಮೌಲ್ಯವು ಇನ್ನೂ ಹೆಚ್ಚಾಗುವ ಸಂಭವವಿರುತ್ತದೆ. ಈ ಪ್ರಕರಣದ ಸುಗಮ ತನಿಖೆಗೆ ಅಡ್ಡಿಯುಂಟು ಮಾಡುವ ಅಥವಾ ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಹಾಗೂ ದಾಖಲೆ/ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಯನ್ನು ಮನಗಂಡು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವಂತೆ ಹಾಗೂ ಅವರ ಲೀನ್ ಅನ್ನು ಬೇರೆಡೆಗೆ ಸ್ಥಳಾಂತರಿಸುವಂತೆ ಎ.ಡಿ.ಜಿ.ಪಿ. ಕರ್ನಾಟಕ ಲೋಕಾಯುಕ್ತ ರವರು ವರದಿ ಮಾಡಿರುತ್ತಾರೆ.

ಮೇಲಿನ ಪ್ರಸ್ತಾವನೆ ಹಾಗೂ ವರದಿಗಳನ್ನು ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 318 ಪೊಸಿಪ 2008, ಬೆಂಗಳೂರು, ದಿನಾಂಕ 01ನೇ ಅಕ್ಟೋಬರ್ 2008.**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 5(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ. ಭೀಮಣ್ಣ ತಾಯಪ್ಪ ಚವ್ಹಾಣ, ಪೊಲೀಸ್ ಉಪಾಧೀಕ್ಷಕರು, ಡಿ.ಸಿ.ಆರ್.ಬಿ. ಧಾರವಾಡ ರವರ ವಿರುದ್ಧ ಶಿಸ್ತು ಕ್ರಮ ಕಾಯ್ದಿಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ. ಇವರ ಲೀನ್ ಅನ್ನು ಸಿ.ಓ.ಡಿ. ಬೆಂಗಳೂರು ಇಲ್ಲಿನ ಡಿವೈ.ಎಸ್.ಪಿ. ಹುದ್ದೆಗೆ ಸ್ಥಳಾಂತರಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ. ಭೀಮಣ್ಣ ತಾಯಪ್ಪ ಚವ್ಹಾಣ, ಪೊಲೀಸ್ ಉಪಾಧೀಕ್ಷಕರು ರವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರ ಅನ್ವಯ ಜೀವನಾಧಾರ ಭತ್ಯೆಯನ್ನು ನೀಡತಕ್ಕದ್ದು.

ಅಮಾನತ್ತಿನ ಅವಧಿಯಲ್ಲಿ ಶ್ರೀ. ಭೀಮಣ್ಣ ತಾಯಪ್ಪ ಚವ್ಹಾಣ, ಪೊಲೀಸ್ ಉಪಾಧೀಕ್ಷಕರು ರವರು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1382

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಬಿ. ಆಂಜನಪ್ಪ, ಅಡಿಷನಲ್ ಎಸ್.ಪಿ. ಮತ್ತು ಶ್ರೀ. ಪಿ. ನಾಗಿರೆಡ್ಡಿ, ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿಗಳು – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 219 ಪೊಸಿಪ 2008 ದಿನಾಂಕ 24–07–2008
2) ದಿನಾಂಕ 27–08–2008ರಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ:3523/2008 ರಲ್ಲಿ ನೀಡಿರುವ ತೀರ್ಪು.
3) ಶ್ರೀ. ಬಿ. ಆಂಜನಪ್ಪ, ಅಡಿಷನಲ್ ಎಸ್.ಪಿ. ರವರ ಮನವಿ ದಿ: 29–08–2008 ಮತ್ತು ಶ್ರೀ. ಪಿ. ನಾಗಿರೆಡ್ಡಿ, ಅಡಿಷನಲ್ ಎಸ್.ಪಿ. ರವರ ಮನವಿ ದಿ:09–09–2008.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 219 ಪೊಸಿಪ 2008 ದಿನಾಂಕ 24–07–2008 ರಲ್ಲಿ ಎಸ್.ಪಿ. (ಸಿವಿಲ್) (ನಾನ್ ಐಪಿಎಸ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ.ಬಿ.ಆಂಜನಪ್ಪ, ಅಡಿಷನಲ್ ಎಸ್.ಪಿ. ರಾಯಚೂರು ಜಿಲ್ಲೆ ಇವರನ್ನು ವರ್ಗಾಯಿಸಿ ಉಪ ಪ್ರಾಂಶುಪಾಲರು, ಪಿ.ಟಿ.ಸಿ. ಗುಲ್ಬರ್ಗಾ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆ ಹಾಗೂ ಶ್ರೀ. ಪಿ. ನಾಗಿರೆಡ್ಡಿ, ಎಸ್.ಪಿ. ಎ.ಡಿ.ಎಸ್. ಗುಲ್ಬರ್ಗಾ ಇವರನ್ನು ಸದರಿ ಅಧಿಸೂಚನೆಯಲ್ಲಿ ಅಡಿಷನಲ್ ಎಸ್.ಪಿ. ರಾಯಚೂರು ಜಿಲ್ಲೆ ಇಲ್ಲಿಗೆ ನೇಮಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಶ್ರೀ.ಬಿ.ಆಂಜನಪ್ಪ ರವರು ಅರ್ಜಿ ಸಂಖ್ಯೆ:3523/2008 ಸಲ್ಲಿಸಿದ್ದು, ಕೆ.ಎ.ಟಿ.ಯು ತನ್ನ ದಿನಾಂಕ 27–08–2008ರಲ್ಲಿ ನೀಡಿರುವ ತೀರ್ಪಿನ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸಿರುವುದನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಗಮನಿಸಿತು. ಸದರಿ ಅರ್ಜಿಯಲ್ಲಿ ಕೆ.ಎ.ಟಿ.ಯು ಕೆಳಕಂಡಂತೆ ತೀರ್ಪು ನೀಡಿದೆ.

"(i) The application is disposed of;

(I) The applicant is directed to file a review application to the Cadre Management Authority within one week from today;

(II) If filed, the Cadre Management Authority shall consider the claim made by the applicant in the review application and pass appropriate orders in accordance with law within two weeks from the date of receipt of the review application, by giving notice to the officials who would be affected by virtue of the review orders to be passed on the review application by the Cadre Management Authority.

(III) Till the final order is passed by the Cadre Management Authority, the Interim Order passed by this Tribunal shall ensure to the benefit of the Applicant.

Sd/-
Chairman
Sd/-
Member"

ದಿನಾಂಕ 12–09–2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಶ್ರೀ. ಬಿ. ಆಂಜನಪ್ಪ, ಅಡಿಷನಲ್ ಎಸ್.ಪಿ. ರಾಯಚೂರು ಜಿಲ್ಲೆ ರವರು ದಿನಾಂಕ 29–08–2008 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಂಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 166 ಪೊಸಇ 2008 (ಭಾ) ಬೆಂಗಳೂರು, ದಿನಾಂಕ: 03ನೇ ಅಕ್ಟೋಬರ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನಂತೆ ಸರ್ಕಾರವು ಪರಿಶೀಲಿಸಿ, ದಿನಾಂಕ 24–07–2008ರ ಅಧಿಸೂಚನೆ ಸಂಖ್ಯೆ:ಒಇ 219 ಪೊಸಿಪ 2008 ರಲ್ಲಿ ಆದೇಶಿಸಿರುವ ವರ್ಗಾವಣೆಗಳನ್ನು ಸ್ಥಿರೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ<br>**ಶ್ರೀಯುತರು:** | ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸು |
|---|---|---|
| 1. | ಶ್ರೀ. ಬಿ. ಆಂಜನಪ್ಪ,<br>ಅಡಿಷನಲ್ ಎಸ್.ಪಿ. ರಾಯಚೂರು ಜಿಲ್ಲೆ | ಉಪ ಪ್ರಾಂಶುಪಾಲರು, ಪಿ.ಟಿ.ಸಿ. ಗುಲ್ಬರ್ಗಾ |
| 2. | ಶ್ರೀ. ಪಿ. ನಾಗಿರೆಡ್ಡಿ,<br>ಎಸ್.ಪಿ. ಎ.ಡಿ.ಎಸ್. ಗುಲ್ಬರ್ಗಾ | ಅಡಿಷನಲ್ ಎಸ್.ಪಿ. ರಾಯಚೂರು ಜಿಲ್ಲೆ |

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರು ಸಂಖ್ಯೆ:ಪಿಎಸ್‌ಸಿಎಂ/ಎಫ್/2296/2008 ದಿನಾಂಕ 20–09–2008 ರಲ್ಲಿ ಅನುಮೋದಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1412

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಆರ್. ಕುಮಾರಸ್ವಾಮಿ, ಎಸ್.ಪಿ. ಮತ್ತು ಶ್ರೀ.ಲಕ್ಷ್ಮಣ ಸಿಂಗ್, ಡಿ.ಸಿ.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 291 ಪೊಸಿಪ 2008 ದಿನಾಂಕ 27–08–2008.
2) ದಿನಾಂಕ 28–08–2008ರಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ: 4124/2008 ರಲ್ಲಿ ನೀಡಿರುವ ತೀರ್ಪು.
3) ಶ್ರೀ. ಆರ್. ಕುಮಾರಸ್ವಾಮಿ, ಎಸ್.ಪಿ. ರವರ ಮನವಿ ದಿ:05–09–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 291 ಪೊಸಿಪ 2008 ದಿನಾಂಕ 27–08–2008ರಲ್ಲಿ ಎಸ್.ಪಿ. (ಸಿವಿಲ್) (ನಾನ್ ಐಪಿಎಸ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ. ಆರ್. ಕುಮಾರಸ್ವಾಮಿ, ಎಸ್.ಪಿ. ಬಿ.ಎಂ.ಟಿ.ಎಫ್. ಬೆಂಗಳೂರು ಇವರನ್ನು ವರ್ಗಾಯಿಸಿ ಡಿ.ಸಿ.ಪಿ. ವಿಧಾನಸೌಧ ಭದ್ರತೆ, ಬೆಂಗಳೂರು ಇಲ್ಲಿಗೆ ಹಾಗೂ ಶ್ರೀ. ಲಕ್ಷ್ಮಣ ಸಿಂಗ್, ಡಿ.ಸಿ.ಪಿ. ವಿಧಾನಸೌಧ ಭದ್ರತೆ, ಬೆಂಗಳೂರು ಇವರನ್ನು ಸದರಿ ಅಧಿಸೂಚನೆಯಲ್ಲಿ ಎಸ್.ಪಿ. ಬಿ.ಎಂ.ಟಿ.ಎಫ್. ಬೆಂಗಳೂರು ಇಲ್ಲಿಗೆ ನೇಮಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಶ್ರೀ. ಆರ್. ಕುಮಾರಸ್ವಾಮಿ, ರವರು ಅರ್ಜಿ ಸಂಖ್ಯೆ:4124/2008 ಸಲ್ಲಿಸಿದ್ದು, ಕೆ.ಎ.ಟಿ.ಯು ತನ್ನ ದಿನಾಂಕ 28–08–2008ರಲ್ಲಿ ನೀಡಿರುವ ತೀರ್ಪಿನ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸಿರುವುದನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಗಮನಿಸಿತು. ಸದರಿ ಅರ್ಜಿಯಲ್ಲಿ ರಂದು ಕೆ.ಎ.ಟಿ.ಯು ಕೆಳಕಂಡಂತೆ ತೀರ್ಪು ನೀಡಿದೆ.

"(I) The application is disposed of;

(II) The Cadre Management Authority is directed to consider the Review Application dated 28-08-2008 (Annexure-A4) and pass appropriate orders in accordance with law within four weeks from the date a certified copy of this order is received by the Cadre Management Authority. However, subject to an opportunity of being heard given to the 2nd respondent.

(III) Till then parties are directed to maintain status-quo as on today, at 3.30 PM.

Sd/-
Chairman
Sd/-
Member"

ದಿನಾಂಕ 12–09–2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಶ್ರೀ. ಆರ್. ಕುಮಾರಸ್ವಾಮಿ, ಎಸ್.ಪಿ. ಬಿ.ಎಂ.ಟಿ.ಎಫ್. ಬೆಂಗಳೂರು ರವರು ದಿನಾಂಕ 05–09–2008 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಂಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 202 ಪೊಸಇ 2008 ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ ದಿನಾಂಕ 27–08–2008ರ ಅಧಿಸೂಚನೆ ಸಂಖ್ಯೆ:ಒಇ 291 ಪೊಸಿಪ 2008 ರಲ್ಲಿ ಆದೇಶಿಸಿರುವ ವರ್ಗಾವಣೆಗಳನ್ನು ಸ್ಥಿರೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ **ಶ್ರೀಯುತರು:** | ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸು |
|---|---|---|
| 1. | ಶ್ರೀ. ಆರ್. ಕುಮಾರಸ್ವಾಮಿ, ಎಸ್.ಪಿ. ಬಿ.ಎಂ.ಟಿ.ಎಫ್. ಬೆಂಗಳೂರು | ಡಿ.ಸಿ.ಪಿ. ವಿಧಾನಸೌಧ ಭದ್ರತೆ, ಬೆಂಗಳೂರು |
| 2. | ಶ್ರೀ. ಲಕ್ಷ್ಮಣ ಸಿಂಗ್, ಡಿ.ಸಿ.ಪಿ. ವಿಧಾನಸೌಧ ಭದ್ರತೆ, ಬೆಂಗಳೂರು | ಎಸ್.ಪಿ. ಬಿ.ಎಂ.ಟಿ.ಎಫ್. ಬೆಂಗಳೂರು |

ಈ ಆದೇಶವನ್ನು ಮಾನ್ಯ ಮಾನ್ಯ ಮುಖ್ಯಮಂತ್ರಿಯವರು ಟಿಪ್ಪಣಿ ಸಂಖ್ಯೆ:ಪಿಎಸ್‌ಸಿಎಂ/ಎಫ್/2296/2008 ದಿನಾಂಕ 20–09–2008 ರಲ್ಲಿ ಅನುಮೋದಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1413

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಇ.ಎ. ಬೇಗ್, ಡಿವೈ.ಎಸ್.ಪಿ. ಮತ್ತು ಶ್ರೀಮತಿ. ಸಿರಿಗೌರಿ, ಡಿವೈ.ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008, ದಿನಾಂಕ 11–08–2008
2) ದಿನಾಂಕ 13–08–2008ರಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ: 3905/2008 ರಲ್ಲಿ ನೀಡಿರುವ ತೀರ್ಪು.
3) ಶ್ರೀ. ಇ.ಎ. ಬೇಗ್, ಡಿವೈ.ಎಸ್.ಪಿ. ರವರ ಮನವಿ ದಿ: 14–08–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ದಿನಾಂಕ 11–08–2008 ರಲ್ಲಿ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ.ಇ.ಎ.ಬೇಗ್, ಡಿವೈ.ಎಸ್.ಪಿ. ಯಲಹಂಕ ಉಪ ವಿಭಾಗ ಇವರನ್ನು ವರ್ಗಾಯಿಸಿ ಡಿವೈ.ಎಸ್.ಪಿ. ಮುಳಬಾಗಿಲು ಉಪ ವಿಭಾಗ, ಕೋಲಾರ ಜಿಲ್ಲೆ ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆ ಹಾಗೂ ಶ್ರೀಮತಿ. ಸಿರಿಗೌರಿ, ಡಿವೈ.ಎಸ್.ಪಿ. ನೆಲಮಂಗಲ ಉಪ ವಿಭಾಗ ಇವರನ್ನು ಸದರಿ ಅಧಿಸೂಚನೆಯಲ್ಲಿ ಡಿವೈ.ಎಸ್.ಪಿ. ಯಲಹಂಕ ಉಪ ವಿಭಾಗ ಇಲ್ಲಿಗೆ ನೇಮಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಶ್ರೀ. ಇ.ಎ. ಬೇಗ್ ರವರು ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ:3905/2008 ಸಲ್ಲಿಸಿದ್ದು, ಈ ಸಂಬಂಧ ಕೆ.ಎ.ಟಿ.ಯು ದಿನಾಂಕ 13–08–2008ರಲ್ಲಿ ನೀಡಿರುವ ತೀರ್ಪಿನ ಪ್ರತಿಯನ್ನು ಡಿಜಿ ಮತ್ತು ಐಜಿಪಿ ರವರು 27–08–2008 ರಂದು ಸರ್ಕಾರಕ್ಕೆ ಕಳುಹಿಸಿರುವುದನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಗಮನಿಸಿತು. ಸದರಿ ಅರ್ಜಿಯಲ್ಲಿ ಕೆ.ಎ.ಟಿ.ಯು ಕೆಳಕಂಡಂತೆ ತೀರ್ಪು ನೀಡಿದೆ.

"(I) The application is disposed of;

(II) The Cadre Management Authority is directed to consider the Review Application dated 13-08-2008 stated to have been filed by the Applicants and pass appropriate orders in accordance with law within four weeks from the date a certified copy of this order

received by the Cadre Management Authority, after notice and an opportunity of being heard given to the second Respondents in these Applications.

(III) Till then the parties are directed to maintain status-quo as on today at 1.00 PM.

Sd/-
Chairman
Sd/-
Member"

ದಿನಾಂಕ 12–09–2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಶ್ರೀ. ಇ.ಎ. ಬೇಗ್, ಡಿವೈ.ಎಸ್.ಪಿ. ಯಲಹಂಕ ಉಪ ವಿಭಾಗ ರವರು ದಿನಾಂಕ 14–08–2008 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಂಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 200 ಪೊಸಇ 2008 ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ ದಿನಾಂಕ 11–08–2008ರ ಅಧಿಸೂಚನೆ ಸಂಖ್ಯೆ:ಒಇ 218 ಪೊಸಿಪ 2008 ರಲ್ಲಿ ಆದೇಶಿಸಿರುವ ವರ್ಗಾವಣೆಗಳನ್ನು ಸ್ಥಿರೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ | ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸು |
|---|---|---|
| 1. | ಶ್ರೀ. ಇ.ಎ. ಬೇಗ್, ಡಿವೈ.ಎಸ್.ಪಿ. ಯಲಹಂಕ ಉಪ ವಿಭಾಗ, ಬೆಂಗಳೂರು | ಡಿವೈ.ಎಸ್.ಪಿ. ಮುಳಬಾಗಿಲು ಉಪ ವಿಭಾಗ, ಕೋಲಾರ ಜಿಲ್ಲೆ |
| 2. | ಶ್ರೀಮತಿ. ಸಿರಿಗೌರಿ, ಡಿವೈ.ಎಸ್.ಪಿ. ನೆಲಮಂಗಲ ಉಪ ವಿಭಾಗ | ಡಿವೈ.ಎಸ್.ಪಿ. ಯಲಹಂಕ ಉಪ ವಿಭಾಗ, ಬೆಂಗಳೂರು |

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರು ಸಂಖ್ಯೆ:ಪಿಎಸ್‌ಸಿಎಂ/ಎಫ್/2296/2008 ದಿನಾಂಕ 20–09–2008 ರಲ್ಲಿ ಅನುಮೋದಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1417

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಡಾ. ಸಿ.ಬಿ. ವೇದಮೂರ್ತಿ, ಡಿವೈ.ಎಸ್.ಪಿ. ಮತ್ತು ಶ್ರೀ. ಬಾಷಾಸಾಬ್, ಡಿವೈ.ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 218 ಪೊಸಿಪ 2008, ದಿನಾಂಕ 27–08–2008
2) ದಿನಾಂಕ 28–08–2008ರಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ: 4130/2008ರಲ್ಲಿ ನೀಡಿರುವ ತೀರ್ಪು.
3) ಡಾ. ಸಿ.ಬಿ. ವೇದಮೂರ್ತಿ, ಡಿವೈ.ಎಸ್.ಪಿ. ರವರ ಮನವಿ ದಿನಾಂಕ 27–08–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ದಿನಾಂಕ 27–08–2008 ರಲ್ಲಿ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಡಾ. ಸಿ.ಬಿ. ವೇದಮೂರ್ತಿ, ಡಿವೈ.ಎಸ್.ಪಿ. ಭಟ್ಕಳ ಉಪ ವಿಭಾಗ ಇವರನ್ನು ವರ್ಗಾಯಿಸಲಾಗಿದೆ. ಹಾಗೂ ಶ್ರೀ. ಬಾಷಾಸಾಬ್, ಡಿವೈ.ಎಸ್.ಪಿ. ಬಿ.ಎಂ.ಟಿ.ಎಫ್. ಬೆಂಗಳೂರು ಇವರನ್ನು ಸದರಿ ಅಧಿಸೂಚನೆಯಲ್ಲಿ ಡಿವೈ.ಎಸ್.ಪಿ. ಭಟ್ಕಳ ಉಪ ವಿಭಾಗ ಇಲ್ಲಿಗೆ ನೇಮಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಡಾ. ಸಿ.ಬಿ. ವೇದಮೂರ್ತಿ ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 4130/2008 ಸಲ್ಲಿಸಿದ್ದು, ಕೆ.ಎ.ಟಿ.ಯ ತೀರ್ಪಿನ್ನು ಪತ್ರ ಮುಖೇನ ಅರ್ಜಿದಾರರ ಪರ ವಕೀಲರು ದಿನಾಂಕ 28–08–2008 ರಂದು ಸರ್ಕಾರಕ್ಕೆ ಕಳುಹಿಸಿರುವುದನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಗಮನಿಸಿತು. ಸದರಿ ಅರ್ಜಿಯಲ್ಲಿ ಕೆ.ಎ.ಟಿ.ಯು ಕೆಳಕಂಡಂತೆ ತೀರ್ಪು ನೀಡಿದೆ.

"(I) The application is disposed of;

(II) The Cadre Management Authority is directed to consider the Review Application dated 27-08-2008 and pass appropriate orders in accordance with law within four weeks from the date a certified copy of this order received by the Cadre Management Authority, however, subject to an opportunity of being heard given to the 3rd Respondent.

(III) Parties are directed to maintain status-quo as on today at 3.30 PM till then.

Sd/-
Chairman
Sd/-
Member"

ದಿನಾಂಕ 12–09–2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಡಾ. ಸಿ.ಬಿ. ವೇದಮೂರ್ತಿ, ಡಿವೈ.ಎಸ್.ಪಿ. ಭಟ್ಕಳ ಉಪ ವಿಭಾಗ ರವರು ದಿನಾಂಕ 27–08–2008 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಂಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 200 ಪೊಸಇ 2008 ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ ದಿನಾಂಕ 27–08–2008ರ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ರಲ್ಲಿ ವರ್ಗಾಯಿಸಿರುವ ಆದೇಶವನ್ನು ಇವರಿಬ್ಬರ ಮಟ್ಟಿಗೆ ರದ್ದುಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ<br>ಶ್ರೀಯುತರು: | ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸು |
|---|---|---|
| 1. | ಡಾ. ಸಿ.ಬಿ. ವೇದಮೂರ್ತಿ,<br>ಡಿವೈ.ಎಸ್.ಪಿ. ಭಟ್ಕಳ ಉಪ ವಿಭಾಗ ಇಲ್ಲಿಂದ ವರ್ಗಾವಣೆ ಆದೇಶದಲ್ಲಿರುವವರು | ಡಿವೈ.ಎಸ್.ಪಿ. ಭಟ್ಕಳ ಉಪ ವಿಭಾಗದಲ್ಲಿಯೇ ಮುಂದುವರೆಸಲಾಗಿದೆ |
| 2. | ಶ್ರೀ. ಬಾಷಾಸಾಬ್,<br>ಡಿವೈ.ಎಸ್.ಪಿ. ಬಿ.ಎಂ.ಟಿ.ಎಫ್. ಬೆಂಗಳೂರು ಇಲ್ಲಿಂದ ವರ್ಗಾವಣೆ ಆದೇಶದಲ್ಲಿರುವವರು | ಡಿವೈ.ಎಸ್.ಪಿ. ಕೇಂದ್ರ ವಲಯ, ಬೆಂಗಳೂರು – ಖಾಲಿ ಹುದ್ದೆ |

ಈ ಆದೇಶವನ್ನು ಮಾನ್ಯ ಮುಖ್ಯ ಮಂತ್ರಿಯವರ ಕಚೇರಿಯ ಟಿಪ್ಪಣಿ ಸಂಖ್ಯೆ:ಪಿಎಸ್‌ಸಿಎಂ/ಎಫ್/2296/2008 ದಿನಾಂಕ 20–09–2008 ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1418

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಕೆ.ವಿ.ಕೆ. ರೆಡ್ಡಿ, ಎ.ಸಿ.ಪಿ. ಮತ್ತು ಶ್ರೀ. ಆರ್. ಆನಂದ್, ಡಿವೈ.ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ–ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 218 ಪೊಸಿಪ 2008, ದಿನಾಂಕ 11–08–2008.
2) ದಿನಾಂಕ 13–08–2008ರಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ:3904/2008 ರಲ್ಲಿ ನೀಡಿರುವ ತೀರ್ಪು.
3) ಶ್ರೀ. ಕೆ.ವಿ.ಕೆ. ರೆಡ್ಡಿ, ಎ.ಸಿ.ಪಿ. ರವರ ಮನವಿ ದಿನಾಂಕ 13–08–2008

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ದಿನಾಂಕ 11–08–2008 ರಲ್ಲಿ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ. ಕೆ.ವಿ.ಕೆ. ರೆಡ್ಡಿ, ಎ.ಸಿ.ಪಿ. ವಿಜಯನಗರ ಉಪ ವಿಭಾಗ, ಬೆಂಗಳೂರು ಇವರನ್ನು ವರ್ಗಾಯಿಸಿ ಡಿವೈ.ಎಸ್.ಪಿ. ರಾಜ್ಯ ಗುಪ್ತವಾರ್ತೆ, ಬೆಂಗಳೂರು ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆ ಹಾಗೂ ಶ್ರೀ. ಆರ್. ಆನಂದ್, ಡಿವೈ.ಎಸ್.ಪಿ. ಸಿ.ಓ.ಡಿ. ಬೆಂಗಳೂರು ಇವರನ್ನು ಸದರಿ ಅಧಿಸೂಚನೆಯಲ್ಲಿ ಎ.ಸಿ.ಪಿ. ವಿಜಯನಗರ ಉಪ ವಿಭಾಗ, ಬೆಂಗಳೂರು ಇಲ್ಲಿಗೆ ನೇಮಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಶ್ರೀ. ಕೆ.ವಿ.ಕೆ. ರೆಡ್ಡಿ, ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 3904/2008 ಸಲ್ಲಿಸಿದ್ದು, ಕೆ.ಎ.ಟಿ.ಯು ತನ್ನ ದಿನಾಂಕ 13–08–2008ರಲ್ಲಿ ನೀಡಿರುವ ತೀರ್ಪಿನ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸಿರುವುದನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಗಮನಿಸಿತು. ಸದರಿ ಅರ್ಜಿಯಲ್ಲಿ ಕೆ.ಎ.ಟಿ.ಯು ಕೆಳಕಂಡಂತೆ ತೀರ್ಪು ನೀಡಿದೆ.

"(I) The application is disposed of;

(II) The Cadre Management Authority is directed to consider the Review Application dated 13-08-2008 stated to have been filed by the Applicants and pass appropriate orders in accordance with law within four weeks from the date a certified copy of this order is received by the Cadre Management Authority, after notice and an opportunity of being heard given to the second Respondents in these Applications.

(III) Till then the parties are directed to maintain status-quo as on today at 1.00 PM.

Sd/-
Chairman
Sd/-
Member "

ದಿನಾಂಕ 12–09–2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಶ್ರೀ.ಕೆ.ವಿ.ಕೆ.ರೆಡ್ಡಿ, ಎ.ಸಿ.ಪಿ. ವಿಜಯನಗರ ಉಪ ವಿಭಾಗ ರವರು ದಿನಾಂಕ 13–08–2008 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಂಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 181 ಪೊಸಇ 2008 ಬೆಂಗಳೂರು, ದಿನಾಂಕ: 03ನೇ ಅಕ್ಟೋಬರ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ, ದಿನಾಂಕ 11–08–2008ರ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ರಲ್ಲಿ ವರ್ಗಾಯಿಸಿರುವ ಆದೇಶವನ್ನು ಇವರಿಬ್ಬರ ಮಟ್ಟಿಗೆ ರದ್ದುಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ ಶ್ರೀಯುತರು: | ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸು |
|---|---|---|
| 1. | ಶ್ರೀ.ಕೆ.ವಿ.ಕೆ.ರೆಡ್ಡಿ, ಎ.ಸಿ.ಪಿ. ವಿಜಯನಗರ ಉಪ ವಿಭಾಗ, ಬೆಂಗಳೂರು ಇಲ್ಲಿಂದ ವರ್ಗಾವಣೆ ಆದೇಶದಲ್ಲಿರುವವರು | ಎ.ಸಿ.ಪಿ. ವಿಜಯನಗರ ಉಪ ವಿಭಾಗ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರೆಸಲಾಗಿದೆ |
| 2. | ಶ್ರೀ.ಅರ್.ಆನಂದ್, ಡಿವೈ.ಎಸ್.ಪಿ. ಸಿ.ಓ.ಡಿ. ಬೆಂಗಳೂರು ಇಲ್ಲಿಂದ ವರ್ಗಾವಣೆ ಆದೇಶದಲ್ಲಿರುವವರು | ಡಿವೈ.ಎಸ್.ಪಿ. ಸಿ.ಓ.ಡಿ. ಹುದ್ದೆಯಲ್ಲಿಯೇ ಮುಂದುವರೆಸಲಾಗಿದೆ |

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರು ಟಿಪ್ಪಣಿ ಸಂಖ್ಯೆ:ಪಿಎಸ್‌ಸಿಎಂ/ಎಫ್/2296/2008 ದಿನಾಂಕ 20–09–2008 ರಲ್ಲಿ ಅನುಮೋದಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1410

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಜಿ.ಕೆ. ಚನ್ನಬಸಪ್ಪ, ಡಿವೈ.ಎಸ್.ಪಿ ಮತ್ತು ಶ್ರೀ. ಕೆ.ವಿ. ಜಯರಾಮಪ್ಪ, ಡಿವೈ.ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 218 ಪೊಸಿಪ 2008, ದಿನಾಂಕ 27–08–2008
2) ಸರ್ಕಾರಿ ವಕೀಲರ ಪತ್ರ ಸಂಖ್ಯೆ ಸಂಖ್ಯೆ:7553/ಎಜಿ/ಕೆಎಟಿ/08 ದಿನಾಂಕ 02–09–2008.
3) ಶ್ರೀ. ಜಿ.ಕೆ. ಚನ್ನಬಸಪ್ಪ, ಡಿವೈ.ಎಸ್.ಪಿ ರವರ ಮನವಿ ದಿನಾಂಕ 30–08–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ದಿನಾಂಕ 27–08–2008 ರಲ್ಲಿ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ. ಜಿ.ಕೆ. ಚನ್ನಬಸಪ್ಪ, ಡಿವೈ.ಎಸ್.ಪಿ. ಮಧುಗಿರಿ ಉಪ ವಿಭಾಗ ಇವರನ್ನು ವರ್ಗಾಯಿಸಲಾಗಿದೆ. ಹಾಗೂ ಶ್ರೀ. ಕೆ.ವಿ. ಜಯರಾಮಪ್ಪ, ಡಿವೈ.ಎಸ್.ಪಿ. ಸಿ.ಓ.ಡಿ. ಬೆಂಗಳೂರು ಇವರನ್ನು ಸದರಿ ಅಧಿಸೂಚನೆಯಲ್ಲಿ ಡಿವೈ.ಎಸ್.ಪಿ. ಮಧುಗಿರಿ ಉಪ ವಿಭಾಗ ಇಲ್ಲಿಗೆ ನೇಮಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಶ್ರೀ. ಜಿ.ಕೆ. ಚನ್ನಬಸಪ್ಪ ರವರ ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ: 4198/2008 ಸಲ್ಲಿಸಿದ್ದು, ಕೆ.ಎ.ಟಿ.ಯ ಕೆಳಕಂಡ ತೀರ್ಪಿನ್ನು ಪತ್ರ ಮುಖೇನ ಸರ್ಕಾರಿ ವಕೀಲರು ಪತ್ರ ಸಂಖ್ಯೆ: 7553/ಎಜಿ/ಕೆಎಟಿ/08 ದಿನಾಂಕ 02–09–2008 ರಂದು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

> "The above application was moved before the Tribunal at 10-30 AM and the same was taken up for hearing at 4.30 PM. The Hon'ble Tribunal after hearing was pleased to dispose of the above application with a direction to the Cadre Management Authority to consider the review application filed by the applicant and pass orders. Further, the Tribunal by its said order 01-09-2008 directed the respondents to maintain status-quo as on 01-09-2008 at 4.30 PM".

ದಿನಾಂಕ 12–09–2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಶ್ರೀ. ಜಿ.ಕೆ. ಚನ್ನಬಸಪ್ಪ, ಡಿವೈ.ಎಸ್.ಪಿ. ಮಧುಗಿರಿ ಉಪ ವಿಭಾಗ ರವರು ದಿನಾಂಕ 30–08–2008 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಂಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 200 ಪೊಸಇ 2008 ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನಂತೆ ಸರ್ಕಾರವು ಪರಿಶೀಲಿಸಿ ದಿನಾಂಕ 27–08–2008ರ ಅಧಿಸೂಚನೆ ಸಂಖ್ಯೆ:ಒಇ 218 ಪೊಸಿಪ 2008 ರಲ್ಲಿ ಆದೇಶಿಸಿರುವ ವರ್ಗಾವಣೆಗಳನ್ನು ಸ್ಥಿರೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ | ವರ್ಗಾಯಿಸಿ ಸ್ಥಳನಿಯುಕ್ತಿಗೊಳಿಸಿದ ಹುದ್ದೆ |
|---|---|---|
| 1. | ಶ್ರೀ. ಜಿ.ಕೆ. ಚನ್ನಬಸಪ್ಪ, ಡಿವೈ.ಎಸ್.ಪಿ. – ವರ್ಗಾವಣೆ ಆದೇಶದಲ್ಲಿರುವವರು | ಡಿವೈ.ಎಸ್.ಪಿ. ಸಿ.ಓ.ಡಿ. ಬೆಂಗಳೂರು – ಖಾಲಿ ಹುದ್ದೆ |
| 2. | ಶ್ರೀ. ಕೆ.ವಿ. ಜಯರಾಮಪ್ಪ, ಡಿವೈ.ಎಸ್.ಪಿ. ಸಿ.ಓ.ಡಿ. ಬೆಂಗಳೂರು | ಡಿವೈ.ಎಸ್.ಪಿ. ಮಧುಗಿರಿ ಉಪ ವಿಭಾಗ |

ಈ ಆದೇಶವನ್ನು ಮಾನ್ಯ ಮುಖ್ಯ ಮಂತ್ರಿಯವರು ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ/ಎಫ್/2296/2008 ದಿನಾಂಕ 20–09–2008 ರಲ್ಲಿ ಅನುಮೋದಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1414

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಎ.ಬಿ. ಸುಧಾಕರ್, ಎ.ಸಿ.ಪಿ. ಮತ್ತು ಶ್ರೀ. ಬಿ. ಲೋಕೇಶ್, ಡಿವೈ.ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 218 ಪೊಸಿಪ 2008, ದಿನಾಂಕ 11–08–2008
2) ದಿನಾಂಕ 14–08–2008ರಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ:3939/2008ರಲ್ಲಿ ನೀಡಿರುವ ತೀರ್ಪು.
3) ಶ್ರೀ. ಎ.ಬಿ. ಸುಧಾಕರ್, ಎ.ಸಿ.ಪಿ. ರವರ ಮನವಿ ದಿನಾಂಕ 13–08–2008

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ದಿನಾಂಕ 11–08–2008 ರಲ್ಲಿ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ. ಎ.ಬಿ. ಸುಧಾಕರ್, ಎ.ಸಿ.ಪಿ. ಆಡುಗೋಡಿ ಸಂಚಾರ ಉಪ ವಿಭಾಗ, ಬೆಂಗಳೂರು ಇವರನ್ನು ವರ್ಗಾಯಿಸಲಾಗಿದೆ. ಹಾಗೂ ಶ್ರೀ. ಬಿ. ಲೋಕೇಶ್, ಡಿವೈ.ಎಸ್.ಪಿ. ಮೈಸೂರು ಗ್ರಾಮೀಣ ಉಪ ವಿಭಾಗ ಇವರನ್ನು ಸದರಿ ಅಧಿಸೂಚನೆಯಲ್ಲಿ ಎ.ಸಿ.ಪಿ. ಆಡುಗೋಡಿ ಸಂಚಾರ ಉಪ ವಿಭಾಗ, ಬೆಂಗಳೂರು ಇಲ್ಲಿಗೆ ನೇಮಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಶ್ರೀ. ಎ.ಬಿ. ಸುಧಾಕರ್ ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 3939/2008 ಸಲ್ಲಿಸಿದ್ದು, ಕೆ.ಎ.ಟಿ.ಯು ತನ್ನ ದಿನಾಂಕ 14–08–2008ರಲ್ಲಿ ನೀಡಿರುವ ತೀರ್ಪಿನ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸಿರುವುದನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಗಮನಿಸಿತು. ಸದರಿ ಅರ್ಜಿಯಲ್ಲಿ ಕೆ.ಎ.ಟಿ.ಯು ಕೆಳಕಂಡಂತೆ ತೀರ್ಪು ನೀಡಿದೆ.

"(I) The application is disposed of;

(II) The Cadre Management Authority is directed to consider the Review Application dated 13-08-2008 and pass appropriate orders in accordance with law within four weeks from the date a certified copy of this order is received by the Cadre Management Authority, however, subject to an opportunity of being heard given to the 4th respondent.

(III) Parties are directed to maintain status-quo till then.

Sd/-
Chairman
Sd/-
Member "

ದಿನಾಂಕ 12–09–2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಶ್ರೀ. ಎ.ಬಿ. ಸುಧಾಕರ್, ಎ.ಸಿ.ಪಿ. ಆಡುಗೋಡಿ ಸಂಚಾರ ಉಪ ವಿಭಾಗ, ಬೆಂಗಳೂರು ರವರು ದಿನಾಂಕ 13–08–2008 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಂಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 200 ಪೊಸಇ 2008 ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ, ದಿನಾಂಕ 11–08–2008ರ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ರಲ್ಲಿ ಆದೇಶಿಸಿರುವ ವರ್ಗಾವಣೆಗಳನ್ನು ಸ್ಥಿರೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ ಶ್ರೀಯುತರು: | ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸು |
|---|---|---|
| 1. | ಶ್ರೀ. ಎ.ಬಿ. ಸುಧಾಕರ್, ಎ.ಸಿ.ಪಿ. – ವರ್ಗಾವಣೆ ಆದೇಶದಲ್ಲಿದ್ದಾರೆ | ಪ್ರತ್ಯೇಕ ಸ್ಥಳ ನಿಯುಕ್ತಿ ಆದೇಶ ಹೊರಡಿಸಲಾಗುವುದು. |
| 2. | ಶ್ರೀ. ಬಿ. ಲೋಕೇಶ್, ಡಿವೈ.ಎಸ್.ಪಿ. ಮೈಸೂರು ಗ್ರಾಮೀಣ ಉಪ ವಿಭಾಗ | ಎ.ಸಿ.ಪಿ. ಆಡುಗೋಡಿ ಸಂಚಾರ ಉಪ ವಿಭಾಗ, ಬೆಂಗಳೂರು |

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರು ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ/ಎಫ್/2296/2008 ದಿನಾಂಕ 20–09–2008 ರಲ್ಲಿ ಅನುಮೋದಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1415

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಜಯರಾಮ್, ಎ.ಸಿ.ಪಿ. ಮತ್ತು ಶ್ರೀ. ಸಿ.ಕೆ. ಲಿಂಗೇಶ್ ಕುಮಾರ್, ಡಿವೈ.ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ:ಒಇ 218 ಪೊಸಿಪ 2008, ದಿನಾಂಕ 11–08–2008 ಮತ್ತು ದಿನಾಂಕ 29–08–2008.
2) ದಿನಾಂಕ 19–08–2008ರಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ: 3971/2008 ರಲ್ಲಿ ನೀಡಿರುವ ತೀರ್ಪು.
3) ಶ್ರೀ. ಜಯರಾಮ್, ಎ.ಸಿ.ಪಿ. ರವರ ಮನವಿ ದಿನಾಂಕ 30–08–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ದಿನಾಂಕ 11–08–2008 ರಲ್ಲಿ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ. ಜಯರಾಮ್, ಎ.ಸಿ.ಪಿ. ಕೆ.ಆರ್. ಉಪ ವಿಭಾಗ, ಮೈಸೂರು ಇವರನ್ನು ವರ್ಗಾಯಿಸಿ ಡಿವೈ.ಎಸ್.ಪಿ. ಸಿ.ಓ.ಡಿ. ಬೆಂಗಳೂರು ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆ ಹಾಗೂ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ದಿನಾಂಕ 29–08–2008 ರಲ್ಲಿ ಶ್ರೀ. ಸಿ.ಕೆ. ಲಿಂಗೇಶ್ ಕುಮಾರ್, ಡಿವೈ.ಎಸ್.ಪಿ. ವಿ.ವಿ.ಐ.ಪಿ. ಭದ್ರತೆ, ಡಿಜಿ ಮತ್ತು ಐಜಿಪಿ ರವರ ಕಛೇರಿ, ಬೆಂಗಳೂರು ಇವರನ್ನು ಎ.ಸಿ.ಪಿ. ಕೆ.ಆರ್. ಉಪ ವಿಭಾಗ, ಮೈಸೂರು ಇಲ್ಲಿಗೆ ನೇಮಿಸಲಾಗಿದೆ. ತಮ್ಮ ವರ್ಗಾವಣೆಯ ವಿರುದ್ಧ ಶ್ರೀ. ಜಯರಾಮ್ ರವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 3971/2008 ಸಲ್ಲಿಸಿದ್ದು, ಕೆ.ಎ.ಟಿ.ಯು ತನ್ನ ದಿನಾಂಕ 19–08–2008ರಲ್ಲಿ ನೀಡಿರುವ ತೀರ್ಪಿನ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸಿರುವುದನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಗಮನಿಸಿತು. ಸದರಿ ಅರ್ಜಿಯಲ್ಲಿ ಕೆ.ಎ.ಟಿ.ಯು ಕೆಳಕಂಡಂತೆ ತೀರ್ಪು ನೀಡಿದೆ.

"(I) The application is disposed of;

(II) The Cadre Management Authority is directed to consider the Review Application dated 12-08-2008 and pass appropriate orders in accordance with law within four weeks from the date a certified copy of this order is received by the Cadre Management Authority.

(III) Parties are directed to maintain status-quo till then.

Sd/-
Chairman
Sd/-
Member "

ದಿನಾಂಕ 12–09–2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಶ್ರೀ. ಜಯರಾಮ್, ಎ.ಸಿ.ಪಿ. ಕೆ.ಆರ್. ಉಪ ವಿಭಾಗ, ಮೈಸೂರು ರವರು ದಿನಾಂಕ 30–08–2008 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಂಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 181 ಪೊಸಇ 2008 ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ, ದಿನಾಂಕ 11-08-2008 ಮತ್ತು 29-08-2008ರ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ರಲ್ಲಿ ವರ್ಗಾಯಿಸಿರುವ ಆದೇಶವನ್ನು ಇವರಿಬ್ಬರ ಮಟ್ಟಿಗೆ ರದ್ದುಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ | ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸು |
|---|---|---|
| 1. | ಶ್ರೀ. ಜಯರಾಮ್, ಎ.ಸಿ.ಪಿ. ಕೆ.ಆರ್. ಉಪ ವಿಭಾಗ, ಮೈಸೂರು ಇಲ್ಲಿಂದ ವರ್ಗಾವಣೆ ಆದೇಶದಲ್ಲಿರುವವರು | ಎ.ಸಿ.ಪಿ. ಕೆ.ಆರ್. ಉಪ ವಿಭಾಗ, ಮೈಸೂರು ಹುದ್ದೆಯಲ್ಲಿಯೇ ಮುಂದುವರೆಸಲಾಗಿದೆ |
| 2. | ಶ್ರೀ. ಸಿ.ಕೆ. ಲಿಂಗೇಶ್ ಕುಮಾರ್, ಡಿವೈ.ಎಸ್.ಪಿ. ವಿ.ವಿ.ಐ.ಪಿ. ಭದ್ರತೆ, ಡಿಜಿ ಮತ್ತು ಐಜಿಪಿ ರವರ ಕಛೇರಿ, ಬೆಂಗಳೂರು | ಪ್ರತ್ಯೇಕ ಸ್ಥಳ ನಿಯುಕ್ತಿ ಆದೇಶ ಹೊರಡಿಸಲಾಗುವುದು. |

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರು ಟಿಪ್ಪಣಿ ಸಂಖ್ಯೆ:ಪಿಎಸ್‌ಸಿಎಂ/ಎಫ್/2296/2008 ದಿನಾಂಕ 20-09-2008 ರಲ್ಲಿ ಅನುಮೋದಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1411

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಮಾರ್ಟಿನ್ ಆಲ್ವೇರಿಸ್, ಎ.ಸಿ.ಪಿ. ಮತ್ತು ಶ್ರೀ. ವೀರೇಶ ಭದ್ರಪ್ಪ ಬೆಳವಡಿ, ಡಿವೈ.ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008, ದಿನಾಂಕ 22-08-2008.
2) ಕೆ.ಎ.ಟಿ. ಅರ್ಜಿ ಸಂಖ್ಯೆ: 4091/2008.
3) ಶ್ರೀ. ಮಾರ್ಟಿನ್ ಆಲ್ವೇರಿಸ್, ಎ.ಸಿ.ಪಿ. ರವರ ಮನವಿ ದಿ:23-08-2008

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ದಿನಾಂಕ 22-08-2008 ರಲ್ಲಿ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ. ಮಾರ್ಟಿನ್ ಆಲ್ವೇರಿಸ್, ಎ.ಸಿ.ಪಿ. ಏರ್‌ಪೋರ್ಟ್ ಉಪ ವಿಭಾಗ, ಬೆಂಗಳೂರು ಇವರನ್ನು ವರ್ಗಾಯಿಸಿ ಡಿವೈ.ಎಸ್.ಪಿ. ರಾಜ್ಯ ಗುಪ್ತವಾರ್ತೆ, ಬೆಂಗಳೂರು ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆ ಹಾಗೂ ಶ್ರೀ. ವೀರೇಶ ಭದ್ರಪ್ಪ ಬೆಳವಡಿ, ಡಿವೈ.ಎಸ್.ಪಿ. ಹೈಕೋರ್ಟ್ ಭದ್ರತೆ, ಬೆಂಗಳೂರು ಇವರನ್ನು ಸದರಿ ಅಧಿಸೂಚನೆಯಲ್ಲಿ ಎ.ಸಿ.ಪಿ. ಏರ್‌ಪೋರ್ಟ್ ಉಪ ವಿಭಾಗ, ಬೆಂಗಳೂರು ಇಲ್ಲಿಗೆ ನೇಮಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಶ್ರೀ. ಮಾರ್ಟಿನ್ ಆಲ್ವೇರಿಸ್ ರವರು ಅರ್ಜಿ ಸಂಖ್ಯೆ: 4091/2008 ಸಲ್ಲಿಸಿರುವುದನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಗಮನಿಸಿತು.

ದಿನಾಂಕ 12-09-2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಶ್ರೀ. ಮಾರ್ಟಿನ್ ಆಲ್ವೇರಿಸ್, ಎ.ಸಿ.ಪಿ. ಏರ್‌ಪೋರ್ಟ್ ಉಪ ವಿಭಾಗ, ಬೆಂಗಳೂರು ರವರು ದಿನಾಂಕ 23-08-2008 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಂಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 200 ಪೊಸಇ 2008 ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ, ದಿನಾಂಕ 22-08-2008ರ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ರಲ್ಲಿ ವರ್ಗಾಯಿಸಿರುವ ಆದೇಶವನ್ನು ಇವರಿಬ್ಬರ ಮಟ್ಟಿಗೆ ರದ್ದುಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ | ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸು |
|---|---|---|
| 1. | ಶ್ರೀ. ಮಾರ್ಟಿನ್ ಆಲ್ವೇರಿಸ್, ಎ.ಸಿ.ಪಿ. ಏರ್‌ಪೋರ್ಟ್ ಉಪ ವಿಭಾಗ, ಬೆಂಗಳೂರು ಇಲ್ಲಿಂದ ವರ್ಗಾವಣೆ ಆದೇಶದಲ್ಲಿರುವವರು | ಎ.ಸಿ.ಪಿ. ಏರ್‌ಪೋರ್ಟ್ ಉಪ ವಿಭಾಗ, ಬೆಂಗಳೂರು ಹುದ್ದೆಯಲ್ಲಿಯೇ ಮುಂದುವರೆಸಲಾಗಿದೆ |
| 2. | ಶ್ರೀ. ವೀರೇಶ ಭದ್ರಪ್ಪ ಬೆಳವಡಿ, ಡಿವೈ.ಎಸ್.ಪಿ. ಹೈಕೋರ್ಟ್ ಭದ್ರತೆ, ಬೆಂಗಳೂರು | ಪ್ರತ್ಯೇಕ ಸ್ಥಳನಿಯುಕ್ತಿ ನಿಯುಕ್ತಿ ಆದೇಶ ಹೊರಡಿಸಲಾಗುವುದು. |
| 3. | ಶ್ರೀ. ವಿ.ಎಸ್. ಅನಿಲ್ ಡಿವೈ.ಎಸ್.ಪಿ. ಸಿ.ಓ.ಡಿ. ಬೆಂಗಳೂರು | ಡಿವೈ.ಎಸ್.ಪಿ. ಹೈಕೋರ್ಟ್ ಭದ್ರತೆ, ಬೆಂಗಳೂರು |

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರು ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ/ಎಫ್/2296/2008 ದಿನಾಂಕ 20–09–2008 ರಲ್ಲಿ ಅನುಮೋದಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1416

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ. ಎಸ್.ಎ. ಖಾದರ್, ಡಿವೈ.ಎಸ್.ಪಿ. ಮತ್ತು ಶ್ರೀ. ಎಂ. ಪ್ರಭುಸ್ವಾಮಿ, ಡಿವೈ.ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008, ದಿನಾಂಕ 11–08–2008.
2) ದಿನಾಂಕ 14–08–2008ರಲ್ಲಿ ಕೆ.ಎ.ಟಿ. ಅರ್ಜಿ ಸಂಖ್ಯೆ: 3951/2008 ರಲ್ಲಿ ನೀಡಿರುವ ತೀರ್ಪು.
3) ಶ್ರೀ. ಎಸ್.ಎ. ಖಾದರ್, ಡಿವೈ.ಎಸ್.ಪಿ. ರವರ ಮನವಿ ದಿ:16–08–2008

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ದಿನಾಂಕ 11–08–2008 ರಲ್ಲಿ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ. ಎಸ್.ಎ. ಖಾದರ್, ಡಿವೈ.ಎಸ್.ಪಿ. ಎಫ್.ಪಿ.ಬಿ. ಕೇಂದ್ರ ವಲಯ, ಬೆಂಗಳೂರು ಇವರನ್ನು ವರ್ಗಾಯಿಸಿ ಡಿವೈ.ಎಸ್.ಪಿ. ಎಫ್.ಪಿ.ಬಿ. ಪಶ್ಚಿಮ ವಲಯ, ಮಂಗಳೂರು ಇಲ್ಲಿಗೆ ಸ್ಥಳನಿಯುಕ್ತಿಗೊಳಿಸಲಾಗಿದೆ ಹಾಗೂ ಶ್ರೀ. ಎಂ. ಪ್ರಭುಸ್ವಾಮಿ, ಡಿವೈ.ಎಸ್.ಪಿ. ಎಫ್.ಪಿ.ಬಿ. ಸಿಟಿ ಯೂನಿಟ್, ಬೆಂಗಳೂರು ಇವರನ್ನು ಸದರಿ ಅಧಿಸೂಚನೆಯಲ್ಲಿ ಡಿವೈ.ಎಸ್.ಪಿ. ಎಫ್.ಪಿ.ಬಿ. ಕೇಂದ್ರ ವಲಯ, ಬೆಂಗಳೂರು ಇಲ್ಲಿಗೆ ನೇಮಿಸಲಾಗಿದೆ. ಸದರಿ ವರ್ಗಾವಣೆಯ ವಿರುದ್ಧ ಶ್ರೀ. ಎಸ್.ಎ. ಖಾದರ್ ರವರು ಅರ್ಜಿ ಸಂಖ್ಯೆ: 3951/2008 ಸಲ್ಲಿಸಿದ್ದು, ಕೆ.ಎ.ಟಿ.ಯ ತೀರ್ಪಿನ್ನು ಪತ್ರ ಮುಖೇನ ಅರ್ಜಿದಾರರ ಪರ ವಕೀಲರು ಸರ್ಕಾರಕ್ಕೆ ಕಳುಹಿಸಿರುವುದನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಗಮನಿಸಿತು. ಸದರಿ ಅರ್ಜಿಯಲ್ಲಿ ಕೆ.ಎ.ಟಿ.ಯು ಕೆಳಕಂಡಂತೆ ತೀರ್ಪು ನೀಡಿದೆ.

"(I) The application is disposed of;

(II) The Cadre Management Authority is directed to consider the Review Application dated 13-08-2008 (original of Annexure-A2) and pass appropriate orders in accordance with law within four weeks from the date a certified copy of this order is received by the Cadre Management Authority. However, subject to an opportunity of being heard given to the concerned respondents.

(III) Parties are directed to maintain status-quo till then.

Sd/-
Chairman
Sd/-
Member "

ದಿನಾಂಕ 12-09-2008 ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಶ್ರೀ. ಎಸ್.ಎ. ಖಾದರ್, ಡಿವೈ.ಎಸ್.ಪಿ. ಎಫ್.ಪಿ.ಬಿ. ಕೇಂದ್ರ ವಲಯ, ಬೆಂಗಳೂರು ರವರು ದಿನಾಂಕ 16-08-2008 ರಂದು ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ನಿರ್ಣಯ ತೆಗೆದುಕೊಂಡಿರುತ್ತದೆ.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 200 ಪೊಸಇ 2008 ಬೆಂಗಳೂರು, ದಿನಾಂಕ: 04ನೇ ಅಕ್ಟೋಬರ್ 2008**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಸರ್ಕಾರವು ಪರಿಶೀಲಿಸಿ ಹಾಗೂ ಇವರು ಪ್ರಸ್ತುತ ಹುದ್ದೆಯಲ್ಲಿ 3 ವರ್ಷಗಳಿಗೂ ಹೆಚ್ಚು ಕಾರ್ಯ ನಿರ್ವಹಿಸಿರುವುದನ್ನು ಪರಿಗಣಿಸಿದ ಸಮಿತಿಯು ದಿನಾಂಕ 11-08-2008ರ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ರಲ್ಲಿ ಆದೇಶಿಸಿರುವ ವರ್ಗಾವಣೆಗಳನ್ನು ಸ್ಥಿರೀಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ ಶ್ರೀಯುತರು: | ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸು |
|---|---|---|
| 1. | ಶ್ರೀ. ಎಸ್.ಎ. ಖಾದರ್, ಡಿವೈ.ಎಸ್.ಪಿ. ಎಫ್.ಪಿ.ಬಿ. ಕೇಂದ್ರ ವಲಯ, ಬೆಂಗಳೂರು | ಡಿವೈ.ಎಸ್.ಪಿ. ಎಫ್.ಪಿ.ಬಿ. ಪಶ್ಚಿಮ ವಲಯ, ಮಂಗಳೂರು |
| 2. | ಶ್ರೀ. ಎಂ. ಪ್ರಭುಸ್ವಾಮಿ, ಡಿವೈ.ಎಸ್.ಪಿ. ಎಫ್.ಪಿ.ಬಿ. ಸಿಟಿ ಯೂನಿಟ್, ಬೆಂಗಳೂರು | ಡಿವೈ.ಎಸ್.ಪಿ. ಎಫ್.ಪಿ.ಬಿ. ಕೇಂದ್ರ ವಲಯ, ಬೆಂಗಳೂರು |

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರು ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ/ಎಫ್/2296/2008 ದಿನಾಂಕ 20-09-2008 ರಲ್ಲಿ ಅನುಮೋದಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1420

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಹರಿಶ್ಚಂದ್ರ ಉದಿಯಾವರ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಭಟ್ಕಳ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 97 ಪಿಪಿಇ 97, ದಿನಾಂಕ: 29.01.1998.
2. ಸರ್ಕಾರದ ಆದೇಶದ ಸಂ. ಒಇ 573 ಪಿಪಿಇ 2005, ದಿನಾಂಕ: 12.07.2006.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 19.03.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ ಲೆಕ್ಕ-1/98/2008-09, ದಿನಾಂಕ: 16.06.2008.

**ಪ್ರಸ್ತಾವನೆ:**

ಶ್ರೀ ಹರಿಶ್ಚಂದ್ರ ಉದಿಯಾವರ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಭಟ್ಕಳ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 29.01.1998ರ ಕ್ರ.ಸಂ:33ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 06.02.1998ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 02.05.1965 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 12.07.2006ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ(ಕ್ರ.ಸಂ.29).

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿಯವರು ದಿನಾಂಕ: 06.02.1998ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು, ಸದರಿಯವರ ಜನ್ಮ ದಿನಾಂಕವನ್ನು 02.05.1965 ಎಂದು ಸರ್ಕಾರವು ಒಪ್ಪಿರುತ್ತದೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು ಸರ್ಕಾರಿ ಸೇವೆಗೆ ಸೇರಿದಾಗ ಅವರ ವಯಸ್ಸು

32ವರ್ಷ 9ತಿಂಗಳು 4ದಿನಗಳಾಗಿರುತ್ತವೆ. ಆದ್ದರಿಂದ, ನಿಯಮಾನುಸಾರ 2ವರ್ಷ 9ತಿಂಗಳ ಹೆಚ್ಚುವರಿ ಸೇವೆಯನ್ನು ನಿವೃತ್ತಿ ವೇತನಕ್ಕಾಗಿ ಸದರಿಯವರ ಅರ್ಹತಾದಾಯಕ ಸೇವೆಯಲ್ಲಿ ಸೇರ್ಪಡೆ ಮಾಡುವಂತೆ ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು, ಶ್ರೀ ಹರಿಶ್ಚಂದ್ರ ಉದಿಯಾವರ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಭಟ್ಕಳ, ಇವರು ದಿನಾಂಕ: 06.02.1998ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ: 02.05.1965 ಆಗಿರುತ್ತದೆ. ಸದರಿ ಅಧಿಕಾರಿಯು ಅವರ 32ವರ್ಷ 09ತಿಂಗಳು 04ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ 2 ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲಕರ ಕಛೇರಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ. ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 269 ಪಿಪಿಇ 2008, ಬೆಂಗಳೂರು, ದಿನಾಂಕ : 25ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಹರಿಶ್ಚಂದ್ರ ಉದಿಯಾವರ, ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಎರಡು ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 1002 ವೆಚ್ಚ–7/2008, ದಿನಾಂಕ: 04.09.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ ಮತ್ತು ಸು, ಕಾಪ್ರಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸರ್ಕಾರಿ ಅಭಿಯೋಜಕರು, ಉಡುಪಿ ಅವರ ಕಛೇರಿಗೆ ಪೂರ್ಣ ಪ್ರಮಾಣದ ಕರ್ನಾಟಕ ರಾಜ್ಯಪತ್ರದ ಪ್ರತಿಗಳನ್ನು ಒದಗಿಸುವ ಕುರಿತು.

**ಉಲ್ಲೇಖ :**
1. ಸರ್ಕಾರದ ಆದೇಶ ನಂ. ಲಾ 245 ಎಲ್‌ಸಿಇ 2001, ದಿನಾಂಕ 27–12–2001.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಕೇಂಸ/ವಿವ/20/2007–08, ದಿನಾಂಕ 18–7–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಉಡುಪಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸರ್ಕಾರಿ ಅಭಿಯೋಜಕರ ಕಛೇರಿಯನ್ನು ಹೊಸದಾಗಿ ಸೃಜನೆ ಮಾಡಲಾಗಿದೆ. ಸದರಿ ಕಛೇರಿಗೆ ಕರ್ನಾಟಕ ರಾಜ್ಯಪತ್ರದ ಪೂರ್ಣ ಭಾಗಗಳನ್ನು ಒದಗಿಸಲು ಕೇಂದ್ರ ಮುದ್ರಣಾಲಯಕ್ಕೆ ಸೂಕ್ತ ನಿರ್ದೇಶನ ನೀಡುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 343 ಪಿಪಿಇ 2008, ಬೆಂಗಳೂರು, ದಿನಾಂಕ: 5ನೇ ಸೆಪ್ಟೆಂಬರ್ 2008**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸರ್ಕಾರಿ ಅಭಿಯೋಜಕರ ಕಛೇರಿಗೆ ರಾಜ್ಯಪತ್ರದ ಪೂರ್ಣ ಭಾಗವನ್ನು ಸರಬರಾಜು ಮಾಡುವಂತೆ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1362
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಒಳಾಡಳಿತ ಇಲಾಖೆ
(ಕಾ ಮತ್ತು ಸು, ಕಾಪ್ರಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಬಿ.ಎಂ. ಕಾರಜೋಳ, ಸರ್ಕಾರಿ ಅಭಿಯೋಜಕರು, 5ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ, ಬೆಂಗಳೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 123 ಪಿಪಿಇ 85, ದಿನಾಂಕ: 03.12.1986.
2. ಸರ್ಕಾರದ ಆದೇಶದ ಸಂ. ಲಾ 161 ಪಿಪಿಇ 87, ದಿನಾಂಕ: 27/30.07.1987.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 20.05.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/54/2008–09, ದಿನಾಂಕ: 16.06.2008.

**ಪ್ರಸ್ತಾವನೆ:**

ಶ್ರೀ ಬಿ.ಎಂ. ಕಾರಜೋಳ, ಸರ್ಕಾರಿ ಅಭಿಯೋಜಕರು, 5ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ, ಬೆಂಗಳೂರು, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 03.12.1986ರ ಹೆಚ್ಚುವರಿ ಪಟ್ಟಿಯನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 12.12.1986ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 10.02.1953 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ:27/30.07.1987ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿಯವರು ದಿನಾಂಕ: 12.12.1986ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು, ಸದರಿಯವರ ಜನ್ಮ ದಿನಾಂಕವನ್ನು 10.02.1953 ಎಂದು ಸರ್ಕಾರವು ಒಪ್ಪಿರುತ್ತದೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು 33ವರ್ಷ 10ತಿಂಗಳು 2ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ನಿಯಮಾನುಸಾರ ಸದರಿಯವರ ಅರ್ಹತಾದಾಯಕ ಸೇವೆಗೆ ಹೆಚ್ಚುವರಿ ಸೇವೆಯನ್ನು ಸೇರ್ಪಡೆ ಮಾಡಲು ಅವಕಾಶವಿರುತ್ತದೆ. ಆದ್ದರಿಂದ, ಸದರಿ ಸೌಲಭ್ಯಕ್ಕೆ ತಮ್ಮನ್ನು ಪರಿಗಣಿಸಬೇಕೆಂದು ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು, ಶ್ರೀ ಬಿ.ಎಂ.ಕಾರಜೋಳ, ಸರ್ಕಾರಿ ಅಭಿಯೋಜಕರು, 5ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ, ಬೆಂಗಳೂರು, ಇವರು ದಿನಾಂಕ: 12.12.1986ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ: 10.02.1953 ಆಗಿರುತ್ತದೆ. ಸದರಿ ಅಧಿಕಾರಿಯು ಅವರ 33ವರ್ಷ 10ತಿಂಗಳು 02ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಸದರಿ ಅಧಿಕಾರಿಯ ನಿವೃತ್ತಿ ವೇತನಕ್ಕೆ ಮೂರು ವರ್ಷಗಳ ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲಕರ ಕಛೇರಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 271 ಪಿಪಿಇ 2008, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2008.**

ಶ್ರೀ ಬಿ.ಎಂ. ಕಾರಜೋಳ, ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಮೂರು ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ 1000 ವೆಚ್ಚ–7/2008, ದಿನಾಂಕ: 10.09.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1464

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಪಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎನ್.ಆರ್. ಲೋಕೇಶ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಹುಣಸೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 225 ಪಿಪಿಇ 91, ದಿನಾಂಕ: 14.06.1994.
2. ಸರ್ಕಾರದ ಪತ್ರದ ಸಂ. ಲಾ 221 ಪಿಪಿಇ 96(6), ದಿನಾಂಕ: 16.11.1996.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 06.05.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/49/2008–09, ದಿನಾಂಕ: 04.07.2008.

**ಪ್ರಸ್ತಾವನೆ:**

ಶ್ರೀ ಎನ್.ಆರ್. ಲೋಕೇಶ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಹುಣಸೂರು, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 14.06.1994, ಕ್ರ.ಸಂ:49ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 06.01.1959 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ:16.11.1996ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿಯವರು ದಿನಾಂಕ:24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು, ಸದರಿಯವರ ಜನ್ಮ ದಿನಾಂಕವನ್ನು 06.01.1959ಎಂದು ಸರ್ಕಾರವು ಒಪ್ಪಿರುತ್ತದೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು ಅವರ 35ವರ್ಷ 5ತಿಂಗಳು 18ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ, ನಿಯಮಾನುಸಾರ ನಾಲ್ಕು ವರ್ಷಗಳ ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಯಲ್ಲಿ ಸೇರ್ಪಡೆ ಮಾಡುವಂತೆ ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು, ಶ್ರೀ ಎನ್.ಆರ್. ಲೋಕೇಶ್, ಸಹಾಯಕ ಸರ್ಕಾರಿ ಅಭಿಯೋಜಕರು, ಜೆಎಂಎಫ್‌ಸಿ ನ್ಯಾಯಾಲಯ, ಹುಣಸೂರು, ಇವರು ದಿನಾಂಕ:24.06.1994ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ: 06.01.1959 ಆಗಿರುತ್ತದೆ. ಸದರಿ ಅಧಿಕಾರಿಯು ಅವರ 35ವರ್ಷ 05ತಿಂಗಳು 18ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲರ ಕಛೇರಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 303 ಪಿಪಿಇ 2008, ಬೆಂಗಳೂರು, ದಿನಾಂಕ : 15ನೇ ಅಕ್ಟೋಬರ್ 2008.**

ಶ್ರೀ ಎನ್.ಆರ್. ಲೋಕೇಶ್, ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವಾವಧಿಯನ್ನು ಶ್ರೀಯುತರ ಪಿಂಚಣಿ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ 998 ವೆಚ್ಚ–7/2008, ದಿನಾಂಕ: 10.09.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1465

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಪಿಪೋಸಾ ಮತ್ತು ಅಭಿಯೋಗಗಳು)

**COMMERCE AND INDUSTRIES SECRETARIAT**

**Sub :** Permission to M/s Murali Industries Ltd, to establish "Cement Plant – 3 Million TPA capacity with 3 x 25 MW Captive Power Plant", in Aloor Village, Chittapur Taluk, Gulbarga District –Reg.

**Ref :** Proceedings of the 11th, 13th & 14th State High Level Clearance Committee (SHLCC) meeting held on 28-9-2007, 13-3-2008 & 17-3-2008.

**Preamble:**

M/s Murali Industries Ltd, has proposed to establish "Cement Plant -3 Million TPA capacity with 3 x 25 MW Captive Power Plant", in 76 acres of land, in different Sy.Nos. of Aloor Village, Chittapur Taluk, Gulbarga District for the Cement & Captive Power Plant & 342 acres 33 guntas of land in different Sy.Nos. of the same village for lime stone mining, with an investment of Rs. 1000.00 crores. The project envisages employment to about 816 persons. The Company has requested for approval of the project and sanction of various infrastructure facilities as well as incentives and concessions.

The State High Level Clearance Committee (SHLCC), in its meeting held on 17-3-2008, after detailed discussion, approved the approved the proposal M/s Murali Industries Ltd, and decided to grant infrastructure facilites and extend incentives and concessions. Hence, the following order.

**Government Order No. CI 94 SPI 2008, Bangalore, Dated 5th May 2008**

The Government is pleased to approve the project proposal of M/s Murali Industries Ltd, to establish "Cement Plant – 3 Million TPA capacity with 3 x 25 MW Captive Power Plant", in different Sy.Nos. of Aloor Village, Chitapur Taluk, Gulbarga District, as indicated in the Annexure, with an investment of Rs. 1000.00 crores and extend the following infrastructure facilities, incentives and concessions.

**INFRASTRUCTURE FACILITIES:**

**Land:** The Revenue Department, to permit the company to purchase 76 acres of land for the factory & 342.825 acres of land for mining of lime stone u/s 109 of KLR Act at various Sy.Nos. of Aloor, Bhomanahalli Villages, Chittapur Taluk, Gulbarga District, as indicated in the annexure and for conversion of the land required for the factory.

**Power:** 1.50 MVA power to be serviced from GESCOM.

**Water :** Water Resources Department to permit the company to draw 6000 KLPD of water from Bhima River, subject to availability. The company shall adopt rainwater harvesting and water recycling.

**Incentives and Concessions:** As per New Industrial Policy 2006-2011.

**Environment:** KSPCB to issue CFE as per their norms. The company shall obtain environment clearance from MOEF, GOI. No civil works shall commence prior to obtaining ECC.

**Employment:** Project proponents shall play a proactive role in enhancing the employability of the local job seekers, including the land losers. Further, the Company shall prepare a plan for development of human resources required for the project, train local people and provide employment to these trained local youth and comply with Government policy of Employment to local people i.e. Dr. Sarojini Mahishi report. A copy of human resources development plan shall be sent to the Commissioner for I.D. & Director of Industries and Commerce for monitoring.

**Vendor Development :** Where ever there is scope for vendor development – for the project, the company shall prepare a vendor development plan develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

**Social Infrastructure Development:** The Company is advised to take up social infrastructure development projects in the vicinity of the proposed location of the unit. A copy of such projects shall be sent to the Government.

**Others:**

1. The promoters shall take all statutory and other necessary clearances and plan approval from competent authorities and shall submit milestones/progress in implementation of the project regularly, which will be monitored by the Departments concerned.

2. The project proponents shall implement rehabilitation and resettlement plan as per the National Rehabilitation and Resettlement Policy 2007, whenever applicable.
3. Wherever acquisition through Karnataka Industrial Area Development Board, (KIADB) is proposed, the project proponents shall provide employment for at least one member of the family of each land loser.
4. In projects which envisage a housing component, the promoters shall reserve 20% of residential built-up area of the project for economically weaker sections (LIG)
5. The project proponents shall provide a map indicating the road connectivity and a note on the anticipated circulation pattern, traffic management, etc. Karnataka Udyoga Mitra, (KUM) shall share this with the PWD and the Police Department. The project proponents shall agree to part with land free of cost for any road widening/traffic mitigation measures that may be suggested by PUblic Works Department (PWD) / Police Department.
6. In all cases where significant employment is to be created under the proposed project, Karnataka Udyoga Mitra (KUM) shall forward the manpower needs to the Departments of Employment & Training and C & I and ensure that skill development programmes are taken up in the catchments area of the project.

This approval is valid for a period of two years from the date of issue.

By order and in the name of the President of India,

**B.R. NAGABHUSHANA**

Desk Officer (Technical Cell)

Commerce & Industries Department.

**Annexure to Government Order No. CI 94 SPI 2008, Bangalore Dt: 5th May 2008**

**Muruli Industries Ltd. Nagpur**

**Tails of Aloor & Bhomanhalli Land**

**1. Land for Plant Area:**

| Sl. No. | Survey No. | Area in Acre | Village | Name of Purchaser | Remark |
|---|---|---|---|---|---|
| 1 | 24 | 1.975 | Aloor | Sunilkumar Maloo | Sale Deed Executed |
| 2 | 25 | 11.275 | Aloor | Sunilkumar Maloo | Sale Deed to be registered |
| 3 | 33 | 29.000 | Aloor | Sunilkumar Maloo | Sale Deed to be registered |
| 4 | 44/1 | 8.500 | Aloor | Nandlal Maloo & | Sale Deed Executed |
| 5 | 44/2 | 8.500 | Aloor | Mahesh Maloo | Sale Deed Executed |
| 6 | 44/3 | 8.500 | Aloor | Mahesh Maloo | Sale Deed Executed |
| 7 | 44/4 | 8.875 | Aloor | Mahesh Maloo | Sale Deed Executed |
| | **Total** | **76.625** | | | |
| **2. Lland for Mining Area** | | | | | |
| Sl. No. | Survey No. | Area in Acre | Village | Name of Purchaser | Remark |
| 1 | 32 | 4.000 | Aloor | Sunilkumar Maloo & | Sale Deed Executed |
| 2 | 32 | 3.975 | Aloor | Murli Manohar Maloo | Sale Deed Executed |
| 3 | 34/1 | 5.150 | Aloor | do | Sale Deed Executed |
| 4 | 34/2 | 5.050 | Aloor | do | Sale Deed Executed |
| 5 | 35 | 14.175 | Aloor | do | Sale Deed Executed |
| 6 | 36 | 7.250 | Aloor | do | Sale Deed Executed |
| 7 | 42/1 | 7.575 | Aloor | do | Sale Deed Executed |
| 8 | 42/2 | 6.875 | Aloor | do | Sale Deed Executed |
| 9 | 43 | 31.600 | Aloor | do | Sale Deed Executed |
| 10 | 45/1 | 9.900 | Aloor | Nandlal Maloo & | Sale Deed Executed |

| Sl. No. | Survey No. | Area in Acre | Village | Name of Purchaser | Remark |
|---|---|---|---|---|---|
| 11 | 45/2 | 4.900 | Aloor | Mahesh Maloo | Sale Deed Executed |
| 12 | 45/2 | 4.925 | Aloor | do | Sale Deed Executed |
| 13 | 48 | 13.450 | Aloor | do | Sale Deed Executed |
| 14 | 49/1 | 6.600 | Bhomanahalli | do | Sale Deed Executed |
| 15 | 49/2 | 6.600 | Bhomanahalli | do | Sale Deed to be registered |
| 16 | 52 | 5.300 | Bhomanahalli | do | Sale Deed Executed |
| 17 | 52 | 5.025 | Bhomanahalli | do | Sale Deed Executed |
| 18 | 53 | 2.725 | Bhomanahalli | do | Sale Deed to be registered |
| 19 | 53/1 | 2.000 | Bhomanahalli | do | Sale Deed to be registered |
| 20 | 53/2 | 2.100 | Bhomanahalli | do | Sale Deed to be registered |
| 21 | 54 | 8.825 | Bhomanahalli | Bajranglal Maloo & | Sale Deed Executed |
| 22 | 54 | 8.825 | Bhomanahalli | Dinesh Maloo | Sale Deed Executed |
| 23 | 55 | 8.000 | Bhomanahalli | do | Sale Deed Executed |
| 24 | 55 | 9.350 | Bhomanahalli | do | Sale Deed Executed |
| 25 | 55 | 3.000 | Bhomanahalli | do | Sale Deed Executed |
| 26 | 56 | 13.925 | Bhomanahalli | do | Sale Deed Executed |
| 27 | 57 | 0.250 | Bhomanahalli | do | Sale Deed to be registered |
| 28 | 57 | 8.250 | Bhomanahalli | do | Sale Deed Executed |
| 29 | 57 | 8.250 | Bhomanahalli | do | Sale Deed Executed |
| 30 | 58 | 10.200 | Bhomanahalli | do | Sale Deed Executed |
| 31 | 58 | 10.000 | Bhomanahalli | do | Sale Deed Executed |
| 32 | 59/1 | 9.000 | Bhomanahalli | do | Sale Deed Executed |
| 33 | 59/2 | 6.875 | Bhomanahalli | do | Sale Deed Executed |
| 34 | 60/1 | 2.35 | Bhomanahalli | Lalchand Maloo & | Sale Deed Executed |
| 35 | 60/1 | 2.35 | Bhomanahalli | Mohan Maloo | Sale Deed Executed |
| 36 | 60/2 | 4.675 | Bhomanahalli | do | Sale Deed Executed |
| 37 | 60/2 | 4.675 | Bhomanahalli | do | Sale Deed Executed |
| 38 | 60/2 | 4.7 | Bhomanahalli | do | Sale Deed Executed |
| 39 | 61/1/1 | 5.775 | Bhomanahalli | do | Sale Deed Executed |
| 40 | 61/1/2 | 5.125 | Bhomanahalli | do | Sale Deed Executed |
| 41 | 61/1 | 5.750 | Bhomanahalli | do | Sale Deed to be registered |
| 42 | 61/2 | 3.000 | Bhomanahalli | do | Sale Deed to be registered |
| 43 | 61/1/1 | 0.625 | Bhomanahalli | do | Sale Deed to be registered |
| 44 | 62/1/1 | 4 | Bhomanahalli | do | Sale Deed Executed |
| 45 | 62/1/2 | 4.85 | Bhomanahalli | do | Sale Deed Executed |
| 46 | 62/2 | 9.7 | Bhomanahalli | do | Sale Deed Executed |
| 47 | 70/1 | 4.750 | Bhomanahalli | do | Sale Deed to be registered |
| 48 | 70/1 | 4.775 | Bhomanahalli | do | Sale Deed to be registered |
| 49 | 70/2 | 9.525 | Bhomanahalli | do | Sale Deed to be registered |
| 50 | 71/1 | 10.3 | Bhomanahalli | do | Sale Deed Executed |
| 51 | 71/2 | 10.2 | Bhomanahalli | do | Sale Deed Executed |
| | **Total** | **342.825** | | | |
| | **Total 1+2** | **419.450** | | | |

**Note:** Total Nos. of sale deed is 45 out of which 4 is pending with sub registrar for scanning the land the land executed on the name of promoters family members.

**B.R. NAGABHUSHANA**
Desk Officer (Technical Cell)
Commerce & Industries Department.

PR. 764

**ಯುವಜನಸೇವಾ ಸಚಿವಾಲಯ**

**ವಿಷಯ :** ರಾಷ್ಟ್ರೀಯ ನಾಟಕ ಶಾಲೆ, ನವದೆಹಲಿ ಇವರಿಗೆ ಬೆಂಗಳೂರಿನಲ್ಲಿ ಪೂರ್ಣ ಪ್ರಮಾಣದ ನಾಟಕ ಶಾಲೆ ನಡೆಸಲು ಗುರುನಾನಕ್ ಭವನದ ಪೂರ್ಣ ಕಟ್ಟಡವನ್ನು ನೀಡುವ ಬಗ್ಗೆ.

**ಓದಲಾಗಿದೆ :**

1. ರಾಷ್ಟ್ರೀಯ ನಾಟಕ ಶಾಲೆ, ನವದೆಹಲಿ ಇವರ ಪತ್ರ ಸಂಖ್ಯೆ ಎನ್‌ಎಸ್‌ಡಿ/ಡಿಐಆರ್/454/2006–07, ದಿನಾಂಕ 5–12–2006.
2. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರಸಂಖ್ಯೆ: ಕಸನಿ/54/ಅಕಾಡೆಮಿ/2006–07, ದಿ: 8–1–2007.
3. ಯುವಜನ ಸೇವಾ ಮತ್ತು ಕ್ರೀಡಾ ಆಯುಕ್ತರುರವರ ಪತ್ರ ಸಂಖ್ಯೆ: ಸಿವೈಎಸ್‌ಎಸ್/ಪಿಎಸ್/ಗುನಾಭ/2006–07, ದಿನಾಂಕ 11–1–2007.
4. ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 15 ಯುಸೇಕ್ರೀ 2007, ದಿನಾಂಕ 24–5–2007.
5. ರಾಷ್ಟ್ರೀಯ ನಾಟಕ ಶಾಲೆ, ಪ್ರಾದೇಶಿಕ ಸಂಪನ್ಮೂಲ ಕೇಂದ್ರ, ಬೆಂಗಳೂರಿನ ಪ್ರಾದೇಶಿಕ ನಿರ್ದೇಶಕರ ಪತ್ರಗಳ ಸಂಖ್ಯೆ: ಎನ್‌ಎಸ್‌ಡಿಆರ್‌ಆರ್‌ಸಿ 2007–08/312(421), ದಿನಾಂಕ 14–12–2007 ಮತ್ತು 25–3–2008.
6. ಕೇಂದ್ರ ಸರ್ಕಾರದ ಸಂಸ್ಕೃತಿ ಮಂತ್ರಾಲಯದ ಕಾರ್ಯದರ್ಶಿಗಳ ಅರೆ ಸರ್ಕಾರಿ ಪತ್ರಸಂಖ್ಯೆ: 5–2–/2008–ಅಕಾಡೆಮಿಸ್, ದಿನಾಂಕ 6–6–2008.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (1)ರ ಪ್ರಸ್ತಾವನೆಯಲ್ಲಿ ನಿರ್ದೇಶಕರು, ರಾಷ್ಟ್ರೀಯ ನಾಟಕ ಶಾಲೆ, ನವದೆಹಲಿ ಇವರು ದಕ್ಷಿಣದ ಐದು ರಾಜ್ಯಗಳಲ್ಲಿ ರಂಗಭೂಮಿಯ ಕಾರ್ಯ ಚಟುವಟಿಕೆಗಳಿಗೆ ಉತ್ತೇಜನ ನೀಡಲು ಪ್ರಾದೇಶಿಕ ಸಂಪನ್ಮೂಲ ಕೇಂದ್ರಗಳನ್ನು 1994ರಲ್ಲೇ ಬೆಂಗಳೂರಿನಲ್ಲಿ ಸ್ಥಾಪಿಸಲಾಗಿದ್ದು, ಅದು ಪ್ರಸಕ್ತ ಎ.ಡಿ.ಎ. ರಂಗಮಂದಿರದ ಸಣ್ಣ ಸ್ಥಳದಲ್ಲಿ ಲೀಸ್ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದು, ಲೀಸ್ ಅವಧಿ ಸಧ್ಯದಲ್ಲಿ ಮುಕ್ತಾಯಗೊಳ್ಳಲಿದೆ. ಈ ಕೇಂದ್ರದ ಚಟುವಟಿಕೆಗಳನ್ನು ವಿಸ್ತಾರಗೊಳಿಸಲು ಹಾಗೂ ರಂಗಕರ್ಮಿಗಳ ಹಾಗೂ ರಂಗಾಸಕ್ತರ ನಿರಂತರ ಬೇಡಿಕೆಯಂತೆ ಬೆಂಗಳೂರಿನಲ್ಲಿ ಪೂರ್ಣ ಪ್ರಮಾಣದ ರಾಷ್ಟ್ರೀಯ ನಾಟಕ ಶಾಲೆ ಕೇಂದ್ರವನ್ನು ಸ್ಥಾಪಿಸುವ ಅಗತ್ಯತೆಯನ್ನು ಹೇಳುತ್ತಾ, ಇದಕ್ಕಾಗಿ ಸೂಕ್ತ ಸ್ಥಳ ಒದಗಿಸುವಂತೆ ಕೋರಿರುತ್ತಾರೆ. ರಾಷ್ಟ್ರೀಯ ನಾಟಕ ಶಾಲೆಯು ರಚಿಸಿರುವ ವಿಷನ್ ಕಮಿಟಿ ಸಹ ಬೆಂಗಳೂರಿನಲ್ಲಿರುವ ರಾಷ್ಟ್ರೀಯ ನಾಟಕ ಶಾಲೆ ಕೇಂದ್ರವನ್ನು ಪೂರ್ಣ ಪ್ರಮಾಣದ ಪ್ರಾದೇಶಿಕ ನಾಟಕ ಶಾಲೆಯನ್ನಾಗಿ ರೂಪಿಸುವ ಅಗತ್ಯವನ್ನು ಒತ್ತಿ ಹೇಳಿದೆಯೆಂದೂ ಸಹ ಅವರು ತಿಳಿಸಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (2)ರ ಪತ್ರದಲ್ಲಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಸದರಿ ಪ್ರಸ್ತಾವನೆಯ ಬಗ್ಗೆ ತನ್ನ ಅಭಿಪ್ರಾಯ ವ್ಯಕ್ತಪಡಿಸುತ್ತಾ, ಗುರುನಾನಕ್ ಭವನವನ್ನು ಬೆಂಗಳೂರಿನ ಪ್ರಾದೇಶಿಕ ರಾಷ್ಟ್ರೀಯ ನಾಟಕ ಶಾಲೆಗೆ ವಹಿಸಿಕೊಡಬಹುದು. ಈ ಕಾರಣಕ್ಕಾಗಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯು ಗುರುನಾನಕ್ ಭವನವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ವರ್ಗಾಯಿಸಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (3)ರ ಪತ್ರದಲ್ಲಿ, ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಬೆಂಗಳೂರು ಇವರು ಗುರುನಾನಕ್ ಭವನದ ಆವರಣದಲ್ಲಿರುವ ಮುಖ್ಯ ಕಟ್ಟಡದಿಂದ ಬೇರೆಯಾಗಿರುವ ಬೆಂಗಳೂರು ಗ್ರಾಮಾಂತರ ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಕಛೇರಿ ಯೂತ್ ಹಾಸ್ಟಲ್ ಅಸೋಸಿಯೇಷನ್ ಹಾಗೂ ಟೇಬಲ್ ಟೆನ್ನಿಸ್ ಮತ್ತು ಇತರೆ ಕ್ರೀಡೆಗಳ ತರಬೇತಿ ಕೇಂದ್ರ ಇವುಗಳಿರುವ ಪ್ರದೇಶವನ್ನು ಮತ್ತು ಕಟ್ಟಡವನ್ನು ಹೊರತುಪಡಿಸಿ, ಗುರುನಾನಕ್ ಭವನದ ಮುಖ್ಯ ಕಟ್ಟಡವನ್ನು ತಾತ್ಕಾಲಿಕವಾಗಿ ರಾಷ್ಟ್ರೀಯ ನಾಟಕ ಶಾಲೆಗೆ ನೀಡುವುದರಲ್ಲಿ ಇಲಾಖೆಯ ಅಭ್ಯಂತರವಿಲ್ಲವೆಂದು ತಿಳಿಸಿದೆ. ಆದರೆ, ಈ ಕಟ್ಟಡವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ವರ್ಗಾಯಿಸಿ, ಆ ಇಲಾಖೆ ಅದನ್ನು ರಾಷ್ಟ್ರೀಯ ನಾಟಕ ಶಾಲೆಗೆ ನೀಡುವ ಬದಲು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯೇ ಗುರುನಾನಕ್ ಭವನದ ಮುಖ್ಯ ಕಟ್ಟಡವನ್ನು ಸದರಿ ನಾಟಕ ಶಾಲೆಗೆ ನಿಗಧಿತ ಅವಧಿಗೆ ವಹಿಸಿಕೊಟ್ಟು, ಅವರು ಸ್ವಂತ ಸ್ಥಳಾವಕಾಶ ಮಾಡಿಕೊಂಡ ಕೂಡಲೇ ಅದನ್ನು ಪುನಃ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ವಾಪಸ್ಸು ಪಡೆಯುವುದು ಸೂಕ್ತ. ಅಲ್ಲದೇ ಬೆಂಗಳೂರು ವಿಶ್ವವಿದ್ಯಾಲಯದ ಆವರಣದಲ್ಲಿ ಕರ್ನಾಟಕ ಕಲಾಗ್ರಾಮ ನಿರ್ಮಾಣ ಮಾಡುತ್ತಿದ್ದು, ಅಲ್ಲಿ ಕಲಾಗ್ರಾಮದ ಜೊತೆಗೆ ರಾಷ್ಟ್ರೀಯ ನಾಟಕ ಶಾಲೆಗೂ

ಸ್ಥಳವನ್ನು ನಿಗಧಿ ಮಾಡಿದೆ. ರಾಷ್ಟ್ರೀಯ ನಾಟಕ ಶಾಲೆಯು ಅಲ್ಲಿಗೆ ಆದಷ್ಟು ಬೇಗ ವರ್ಗಾವಣೆಗೊಳ್ಳಬೇಕೆಂದು ಅಭಿಪ್ರಾಯಪಟ್ಟಿದೆ.

ಮೇಲೆ ಓದಲಾದ ಉಲ್ಲೇಖ (4)ರ ಆದೇಶದಲ್ಲಿ, ಗುರುನಾನಕ್ ಭವನದ ಮುಖ್ಯ ಕಟ್ಟಡದಿಂದ ಪ್ರತ್ಯೇಕವಾಗಿರುವ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಬೆಂಗಳೂರು ಗ್ರಾಮಾಂತರ ಜಿಲ್ಲಾ ಕಛೇರಿ, ಯೂತ್ ಹಾಸ್ಟೇಲ್ ಅಸೋಸಿಯೇಷನ್ ಆಫ್ ಇಂಡಿಯಾ, ಮೌಂಟನೇರಿಂಗ್ ಅಸೋಸಿಯೇಷನ್ ಹಾಗೂ ಟೇಬಲ್ ಟೆನ್ನಿಸ್ ಮತ್ತು ಇತರ ಕ್ರೀಡೆಗಳ ತರಬೇತಿ ಕೇಂದ್ರ ಹಾಗೂ ಕಛೇರಿಗಳಿರುವ ಕಟ್ಟಡಗಳು ಮತ್ತು ಅವುಗಳಿಗೆ ಪಾರ್ಕಿಂಗ್ ಜಾಗ ಇವುಗಳನ್ನು ಹೊರತುಪಡಿಸಿ, ಗುರುನಾನಕ್ ಭವನದ ಮುಖ್ಯ ಸಭಾಂಗಣದ ಕಟ್ಟಡವನ್ನು ಉಳಿದ ಪಾರ್ಕಿಂಗ್ ಜಾಗದೊಡನೆ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯೇ ಮೊದಲಿಗೆ ಮೂರು ವರ್ಷದ ಅವಧಿಗೆ ಅಥವಾ ರಾಷ್ಟ್ರೀಯ ನಾಟಕ ಶಾಲೆಯು ತನ್ನ ಸ್ವಂತ ಕಟ್ಟಡವನ್ನು ಹೊಂದುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಲೋಕೋಪಯೋಗಿ ಇಲಾಖೆ ನಿಗಧಿಪಡಿಸುವ ಪ್ರಸಕ್ತ ಮಾರುಕಟ್ಟೆ ದರದಲ್ಲಿ, ಮಾಸಿಕ ಬಾಡಿಗೆಗೆ ರಾಷ್ಟ್ರೀಯ ನಾಟಕ ಶಾಲೆ, ನವದೆಹಲಿ ಇವರಿಗೆ ನೀಡಲು ಸರ್ಕಾರವು ಕೆಲವು ಷರತ್ತಿಗೊಳಪಟ್ಟು ಮಂಜೂರಾತಿ ನೀಡಿರುತ್ತದೆ.

ಮೇಲೆ ಓದಲಾದ ಉಲ್ಲೇಖ (5)ರ ಪತ್ರಗಳಲ್ಲಿ 2008–09ನೇ ಸಾಲಿನ ಶೈಕ್ಷಣಿಕ ವರ್ಷದಲ್ಲಿ, ರಾಷ್ಟ್ರೀಯ ನಾಟಕ ಶಾಲೆಯನ್ನು ಕಾರ್ಯಾರಂಭಿಸಲು ಉದ್ದೇಶಿಸಿರುವುದಾಗಿ ತಿಳಿಸಿ, ಗುರುನಾನಕ್ ಭವನದ ಸಂಪೂರ್ಣ ಆವರಣವನ್ನು ಒದಗಿಸುವ ಬಗ್ಗೆ ದಿನಾಂಕ 22–12–2007ರಂದು ಕರ್ನಾಟಕ ರಾಜ್ಯದ ರಾಜ್ಯಪಾಲರ ಮುಖ್ಯ ಸಲಹೆಗಾರರಾದ ಶ್ರೀ ಕೃಷ್ಣಕುಮಾರ್‌ರವರ ಅಧ್ಯಕ್ಷತೆಯಲ್ಲಿ ಕೇಂದ್ರ ಸರ್ಕಾರದ ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಶ್ರೀ ಅಭಿಜಿತ್ ಸೇನ್‌ಗುಪ್ತ, ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಶ್ರೀಕಾಂತ್, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಶ್ರೀ ಐ.ಎಂ. ವಿಠ್ಠಲಮೂರ್ತಿ, ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳು ಹಾಗೂ ಇನ್ನಿತರ ಅಧಿಕಾರಿಗಳ ಉಪಸ್ಥಿತಿಯಲ್ಲಿ ನಡೆದ ಸಭೆಯಲ್ಲಿ ರಾಷ್ಟ್ರೀಯ ನಾಟಕ ಶಾಲೆಗೆ ಮೂರು ವರ್ಷಗಳ ಕಾಲ ಗುರುನಾನಕ್ ಭವನದ ಸಂಪೂರ್ಣ ಆವರಣವನ್ನು ಒದಗಿಸುವುದಾಗಿ ತೀರ್ಮಾನ ಕೈಗೊಳ್ಳಲಾಗಿತ್ತು. ಈ ಸಂಬಂಧವಾಗಿ ಇದುವರೆಗೆ ಯಾವುದೇ ಮಾಹಿತಿ ಬಂದಿಲ್ಲವೆಂದು ತಿಳಿಸಿರುತ್ತಾರೆ ಹಾಗೂ ಈ ಬಗ್ಗೆ ಇಲಾಖೆಯು ಕೈಗೊಂಡ ಕ್ರಮಗಳ ಬಗ್ಗೆ ಸೂಕ್ತ ಮಾಹಿತಿ ನೀಡಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ ಉಲ್ಲೇಖ (6)ರ ಅರೆ ಸರ್ಕಾರಿ ಪತ್ರದಲ್ಲಿ, ಗುರುನಾನಕ್ ಭವನದ ಮುಖ್ಯ ಕಟ್ಟಡ ಮತ್ತು ಅದಕ್ಕೆ ಹೊಂದಿಕೊಂಡಂತಿರುವ ವಾಹನಗಳ ನಿಲುಗಡೆ ಜಾಗದಲ್ಲಿ ತಾತ್ಕಾಲಿಕವಾಗಿ ರಾಷ್ಟ್ರೀಯ ನಾಟಕ ಶಾಲೆಯನ್ನು ನಡೆಸಲು ಸಾಧ್ಯವಾಗುವುದಿಲ್ಲ. ಪೂರ್ಣ ಪ್ರಮಾಣದ ಕಟ್ಟಡವನ್ನು ಅಂದರೆ, ಇಡೀ ಗುರುನಾನಕ್ ಭವನವನ್ನು ತಾತ್ಕಾಲಿಕವಾಗಿ ಮೂರು ವರ್ಷಗಳ ಅವಧಿಗೆ ಪ್ರತಿ ತಿಂಗಳು ರೂ. 25,000/–ಗಳ (ರೂಪಾಯಿ ಇಪ್ಪತ್ತೈದು ಸಾವಿರಗಳು ಮಾತ್ರ) ಬಾಡಿಗೆ ಆಧಾರದ ಮೇಲೆ ಹಸ್ತಾಂತರಿಸಿದ್ದಲ್ಲಿ ಮಾತ್ರ ರಾಷ್ಟ್ರೀಯ ನಾಟಕ ಶಾಲೆಯ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಸಾಧ್ಯವಾಗುತ್ತದೆಯೆಂದು ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ ಕ್ಯಾಂಪಸ್‌ನಲ್ಲಿ ಕಲಾ ಗ್ರಾಮಕ್ಕಾಗಿ ಇಂದಿರಾಗಾಂಧಿ ನ್ಯಾಷನಲ್ ಸೆಂಟರ್ ಫಾರ್ ದಿ ಆರ್ಟ್ಸ್ ಇವರಿಗೆ ಒದಗಿಸಿರುವ 10 ಎಕರೆ ಜಾಗದಲ್ಲಿ, ರಾಷ್ಟ್ರೀಯ ನಾಟಕ ಶಾಲೆಯವರಿಗೆ 2 ಎಕರೆ ಜಾಗವನ್ನು ನೀಡಲಿದ್ದು, ಸದರಿ ಜಾಗದಲ್ಲಿ ಮೂಲಭೂತ ಸೌಕರ್ಯಗಳೊಂದಿಗೆ ಸ್ವಂತ ಕಟ್ಟಡವನ್ನು ರಾಷ್ಟ್ರೀಯ ನಾಟಕ ಶಾಲೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ನೀಡಲು ಒಪ್ಪಿದೆಯೆಂದು ಸಹ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 104 ಯುಸೇಕ್ರೀ 2008, ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2008**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯು ಗುರುನಾನಕ್ ಭವನದ ಪೂರ್ಣ ಕಟ್ಟಡವನ್ನು ನವದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯವರಿಗೆ ಬೆಂಗಳೂರಿನಲ್ಲಿ ಪ್ರಾದೇಶಿಕ ಶಾಲೆಯನ್ನು ತೆರೆಯಲು ಲೋಕೋಪಯೋಗಿ ಇಲಾಖೆ ನಿಗಧಿಪಡಿಸುವ ಪ್ರಸಕ್ತ ಮಾರುಕಟ್ಟೆ ಬೆಲೆಯಲ್ಲಿ ಮೂರು ವರ್ಷಗಳ ಅವಧಿಗೆ ಮಾಸಿಕ ಬಾಡಿಗೆ ಆಧಾರದ ಮೇಲೆ ನೀಡಲು ಅಥವಾ ರಾಷ್ಟ್ರೀಯ ನಾಟಕ ಶಾಲೆಯು ತನ್ನ ಸ್ವಂತ ಕಟ್ಟಡವನ್ನು ಹೊಂದುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೀಡಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ ಸಿ: 41:2008, ದಿನಾಂಕ 7–8–2008ರ ಸಹಮತಿಯನ್ವಯ ಹೊರಿಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1251

**ಭವಾನಿದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಯುವಜನಸೇವಾ ಇಲಾಖೆ